ಅಪ್ಪಯ್ಯ ದೀಕ್ಷಿತ ವಿರಚಿತಃ

# ಶ್ರೀ ವರದರಾಜಸ್ತವಃ

ಕನ್ನಡ ಅನುವಾದ

**ಎಚ್.ವಿ. ನಾಗರಾಜರಾವ್**

This book is published with the financial assistance of T.T. Devasthanams under their Scheme "Aid to publish Religious books"

**ಸುಧರ್ಮಾ ಪ್ರಕಾಶನ**

561, ಎರಡನೇ ರಾಮಚಂದ್ರ ಅಗ್ರಹಾರ

ಮೈಸೂರು - 570 004

1997

ಅಪ್ಪಯ್ಯ ದೀಕ್ಷಿತ ವಿರಚಿತಃ

# ಶ್ರೀ ವರದರಾಜಸ್ತವಃ

ಕನ್ನಡ ಅನುವಾದ

**ಎಚ್.ವಿ. ನಾಗರಾಜರಾವ್**

This book is published with the financial assistance of T.T. Devasthanams under their Scheme "Aid to publish Religious books"

**ಸುಧರ್ಮಾ ಪ್ರಕಾಶನ**

561, ಎರಡನೇ ರಾಮಚಂದ್ರ ಅಗ್ರಹಾರ

ಮೈಸೂರು - 570 004

1997

ಈ ಕೃತಿಯು ನನ್ನ ಪೂಜ್ಯ ತಂದೆ

ಬಿ. ವೆಂಕಟನಾರಾಯಣಪ್ಪನವರಿಗೆ

ಅರ್ಪಿತವಾಗಿದೆ.

-ಎಚ್.ವಿ. ನಾಗರಾಜರಾವ್

# ಪೀಠಿಕೆ

ಶ್ರೀ ತಿರುಮಲ ತಿರುಪತಿ ದೇವಸ್ಥಾನದ ಆರ್ಥಿಕ ನೆರವಿನಿಂದ ಅಪ್ಪಯ್ಯ ದೀಕ್ಷಿತರ ವರದರಾಜಸ್ತವವನ್ನು ಆಸ್ತಿಕರಿಗೆ ಅರ್ಪಿಸಲು ಅತ್ಯಂತ ಹರ್ಷವಾಗುತ್ತದೆ. ಧಾರ್ಮಿಕ ಸಾಹಿತ್ಯದ ಪ್ರಕಟನೆಗೆ ಈ ದೇವಸ್ಥಾನದ ಬೆಂಬಲ ಸಿಗುತ್ತಿರುವುದರಿಂದ ಅಪೂರ್ವ ಗ್ರಂಥಗಳ ಅವಲೋಕನ ಮಾಡಬೇಕೆಂಬ ಜನರ ಹಂಬಲ ಈಡೇರುತ್ತಿದೆ. ಸಂಸ್ಕೃತವನ್ನು ಅರ್ಥೈಸಿಕೊಳ್ಳಲಾರದವರಿಗಾಗಿ ಕನ್ನಡ ಅನುವಾದವನ್ನೂ ವಿವರಣೆಯನ್ನೂ ಇಲ್ಲಿ ಕೊಡಲಾಗಿದೆ.

## ಸ್ತೋತ್ರಸಾಹಿತ್ಯ

'ಗುಣಗತಗುಣಾಭಿಧಾನಂ ಸ್ತುತಿಃ' ಗುಣಗಳು ಯಾರಲ್ಲಿ ನಿಜವಾಗಿ ಇವೆಯೋ, ಅವರ ಗುಣಗಳ ವರ್ಣನೆಯೇ ಸ್ತೋತ್ರ. ಇಲ್ಲದ ಗುಣಗಳನ್ನು ಕಲ್ಪಿಸಿ ಮಾಡುವ ಮುಖಸ್ತುತಿ ಸ್ತೋತ್ರವಲ್ಲ. ಭಗವಂತನು ಸಕಲಕಲ್ಯಾಣಗುಣಪರಿಪೂರ್ಣ ನೆಂದು ವೇದಾದಿ ಶಾಸ್ತ್ರಗಳು ಹೇಳುತ್ತಿರುವುದರಿಂದ ಅವನ ಹೊಗಳುವಿಕೆ ಸ್ತೋತ್ರ ಅಥವಾ ಸ್ತವ ಎನಿಸುತ್ತದೆ. ವೇದಗಳೆಲ್ಲಾ ಪರಮಾತ್ಮನ ಸ್ತೋತ್ರವನ್ನೇ ಮಾಡುತ್ತವೆಯೆಂದು ಭಗವದ್ಗೀತೆಯು ತಿಳಿಸುತ್ತದೆ. (ಸರ್ವೈಶ್ಚ ವೇದೈರಹಮೇವ ವೇದ್ಯಃ) ಅಪೌರುಷೇಯವೆಂದು ಪ್ರಸಿದ್ಧವಾದ ವೇದಗಳೂ ಕೂಡ ಭಗವಂತನ ಸ್ತೋತ್ರವನ್ನು ಪೂರ್ಣವಾಗಿ ಮಾಡಲಾರವು ಎಂದು ಶಾಸ್ತ್ರಗಳ ಸಿದ್ಧಾಂತ. ಋಷಿಗಳೂ ಕವಿಗಳೂ ಭಗವದ್ಗುಣಸಮುದ್ರದ ಒಂದು ಸಣ್ಣ ಭಾಗವನ್ನು ಮಾತ್ರ ವರ್ಣಿಸುತ್ತಾರೆ. ಆದ್ದರಿಂದ ಎಷ್ಟು ಸ್ತೋತ್ರಗಳು ಈಗಾಗಲೇ ರಚಿತವಾಗಿದ್ದರೂ ಇನ್ನೂ ಹೊಸ ಸ್ತೋತ್ರಗಳ ರಚನೆಗೆ ವಿಪುಲವಾದ ಅವಕಾಶ ಸದಾ ಇದ್ದೇ ಇರುತ್ತದೆ. ಈ ಕಾರಣದಿಂದ ಭಾರತದ ಎಲ್ಲಾ ಭಾಷೆಗಳಲ್ಲಿ ಸಮೃದ್ಧವಾಗಿ ಸ್ತೋತ್ರಸಾಹಿತ್ಯವು ರಚಿತವಾಗಿದೆ, ರಚಿತವಾಗುತ್ತಿದೆ. ದೇವಭಾಷೆಯೆನಿಸಿದ ಸಂಸ್ಕೃತದಲ್ಲಂತೂ ಪುಷ್ಕಳವಾಗಿ ಸ್ತೋತ್ರಸಾಹಿತ್ಯ ಬೆಳೆದುನಿಂತಿದೆ.

ಅನೇಕ ಸ್ತೋತ್ರಗಳು ಪುರಾಣಗಳ ಅಥವಾ ಕಾವ್ಯಗಳ ಅಂಶಗಳು. ರಾಮಾಯಣದಲ್ಲಿರುವ ***'ಆದಿತ್ಯ ಹೃದಯ'*** ಎಂಬ ಸೂರ್ಯಸ್ತೋತ್ರ ಸುಪ್ರಸಿದ್ಧ. ಭಗವದ್ಗೀತೆಯ ಹನ್ನೊಂದನೆಯ ಅಧ್ಯಾಯದಲ್ಲಿ ಬರುವ ***ವಿಶ್ವರೂಪದರ್ಶನ*** ದಲ್ಲಿ ಅದ್ಭುತವಾದ ಸ್ತೋತ್ರವಿದೆ. ಶ್ರೀಮದ್‌ಭಾಗವತದಲ್ಲಿ ಅನೇಕ ಸ್ತೋತ್ರಗಳಿವೆ. (ದಶಮಸ್ಕಂಧ ಎರಡನೆಯ ಅಧ್ಯಾಯದಲ್ಲಿ ಬ್ರಹ್ಮಾದಿ ದೇವತೆಗಳು ಭಗವಂತನನ್ನು

ಸ್ತುತಿಸುತ್ತಾರೆ. ಹೀಗೆಯೇ ಹದಿನಾಲ್ಕನೆಯ ಅಧ್ಯಾಯ, ಹದಿನೇಳನೆಯ ಅಧ್ಯಾಯ ಮುಂತಾದವುಗಳನ್ನು ಗಮನಿಸಬಹುದು).

ಹೀಗೆ ಗ್ರಂಥಗಳ ಅಂಶವಾಗಿ ಬರುವ ಸ್ತೋತ್ರಗಳಲ್ಲದೆ ಸ್ವತಂತ್ರ ಕೃತಿಗಳಾದ ಸ್ತೋತ್ರಗಳೂ ಸಂಸ್ಕೃತದಲ್ಲಿ ನೂರಾರು ಇವೆ. ಶಂಕರ, ರಾಮಾನುಜ, ಮಧ್ವ ಮುಂತಾದ ಮತಸಂಸ್ಥಾಪಕಾಚಾರ್ಯರು ಸಾಕಷ್ಟು ಸ್ತೋತ್ರಗಳನ್ನು ರಚಿಸಿದ್ದಾರೆ. ಭಕ್ತ ಕವಿಗಳು ಭಗವಂತನ ಮಹಿಮೆಯ ಅನುಸಂಧಾನಕ್ಕಾಗಿ ರಚಿಸಿರುವ ಸ್ತೋತ್ರಗಳೂ ಅನೇಕ. ಅವುಗಳಲ್ಲಿ ಕೆಲವು ಸಾಧಾರಣ ಗುಣಗಳಿಂದ ಕೂಡಿದವೂ ಇವೆ. ಮತ್ತೆ ಹಲವು ವಿಶಿಷ್ಟ ಸೌಂದರ್ಯದಿಂದ ಶೋಭಿಸಿ ಕರ್ತೃಗಳ ಪಾಂಡಿತ್ಯವನ್ನೂ ಪ್ರತಿಭೆಯನ್ನೂ ಪ್ರಕಾಶಕ್ಕೆ ತರುತ್ತವೆ. ಪುಷ್ಪದಂತ ವಿರಚಿತವಾದ ***ಮಹಿಮ್ನಃ ಸ್ತವ***, ಕುಲಶೇಖರ ಆಳ್ವಾರರ ***ಮುಕುಂದಮಾಲಾ***, ವೇದಾಂತ ದೇಶಿಕರ ***ಪಾದುಕಾಸಹಸ್ರ***, ನೀಲಕಂಠದೀಕ್ಷಿತರ ***ಆನಂದಸಾಗರಸ್ತವ***, ವೇಂಕಟಾಧ್ವರಿಯ ***ಲಕ್ಷ್ಮೀಸಹಸ್ರ*** ಇತ್ಯಾದಿಗಳು ಮಾಧುರ್ಯ-ಪ್ರಸಾದ-ಓಜಸ್ ಎಂಬ ಗುಣಗಳಿಂದಲೂ, ಉಪಮಾನು-ಪ್ರಾಸಾದ್ಯಲಂಕಾರಗಳಿಂದಲೂ ಶೋಭಿತವಾಗಿ ಭಕ್ತರ ಪಾರಾಯಣಕ್ಕೆ ಮಾತ್ರವಲ್ಲ, ರಸಿಕರ ಚರ್ವಣೆಗೂ ಉತ್ತಮ ವಸ್ತುಗಳಾಗಿವೆ. ಇಂಥ ಕಾವ್ಯಮಯ ಸ್ತೋತ್ರಗಳ ಸಾಲಿಗೆ ಸೇರಲು ಅರ್ಹವಾಗಿರುವುದು ಅಪ್ಪಯ್ಯ ದೀಕ್ಷಿತರ ***ವರದರಾಜಸ್ತವ***.

## ಅಪ್ಪಯ್ಯ ದೀಕ್ಷಿತರು

ಹದಿನಾರನೆಯ ಶತಮಾನದ ಉತ್ತರಾರ್ಧದಲ್ಲಿ ಶ್ರೇಷ್ಠ ವಿದ್ವಾಂಸರೆಂದೂ, ಉತ್ತಮ ಕವಿಗಳೆಂದೂ, ಸಮರ್ಥ ವ್ಯಾಖ್ಯಾನಕಾರರೆಂದೂ ಪ್ರಸಿದ್ಧಿ ಪಡೆದು ಗೌರವಕ್ಕೆ ಪಾತ್ರರಾಗಿ ನಾನಾ ರಾಜರಿಂದ ಪೂಜಿತರಾದ ಮಹಾಪುರುಷರು ಅಪ್ಪಯ್ಯ ದೀಕ್ಷಿತರು. ಭಾರದ್ವಾಜಗೋತ್ರದ ರಂಗರಾಜಾಧ್ವರಿಗಳ ವರಪುತ್ರರಾದ ಅಪ್ಪಯ್ಯ ದೀಕ್ಷಿತರು 'ಶಿವನ ಒಂದು ಅವತಾರ' ಎಂದು ಆಗಿನ ಜನರು ಹೊಗಳುವಷ್ಟು ಪ್ರಭಾವಶಾಲಿಗಳಾಗಿದ್ದರು. ಇವರ ವಂಶದಲ್ಲೇ ಹುಟ್ಟಿ ಪ್ರಖ್ಯಾತರಾದ ನೀಲಕಂಠ ದೀಕ್ಷಿತರು ನೀಲಕಂಠವಿಜಯ ಚಂಪೂ ಎಂಬ ಗ್ರಂಥದಲ್ಲಿ ಇದನ್ನು ಸ್ಪಷ್ಟವಾಗಿ ಹೇಳುತ್ತಾರೆ.

> *"ಶ್ರೀಕಂಠೋಽವತತಾರ ಯಸ್ಯ ವಪುಷಾ ಕಲ್ಯಾಣ[illegible]ಚ್ಯುತಃ*
> *ಶ್ರೀಮಾನಪ್ಪಯದೀಕ್ಷಿತಃ ಸ ಜಯತಿ ಶ್ರೀಕಂಠ[illegible]ಗುರುಃ ॥*

ಹದಿನಾರನೆಯ ಶತಮಾನದ ಉತ್ತ[illegible]ದಲ್ಲಿ ಪೆನುಗೊಂಡೆಯಿಂದ ವಿಜಯನಗರದ ಅವಶಿಷ್ಟ ಸಾಮ್ರಾಜ್ಯವನ್ನು [illegible]ದ್ದ ವೇಂಕಟಪತಿರಾಯನೂ, ಅವನ ಸಾಮಂತನಾಗಿದ್ದ ಚಿನ್ನಬೊಮ್ಮ[illegible] ಅಪ್ಪಯ್ಯ ದೀಕ್ಷಿತರಿಗೆ ಆಶ್ರಯವನ್ನು ಕೊಟ್ಟಿದ್ದುದು ನಿಸ್ಸಂದೇಹವಾಗಿ ತಿಳಿದುಬರುತ್ತದೆ.

## ಅಪ್ಪಯ್ಯ ದೀಕ್ಷಿತರ ಸಾಹಿತ್ಯ ಮತ್ತು ಕೃತಿಗಳು

ಅಪ್ಪಯ್ಯ ದೀಕ್ಷಿತರು ಎಪ್ಪತ್ತೆರಡು ವರ್ಷಗಳ ಕಾಲ ಜೀವಿಸಿದ್ದರೆಂಬುದು ಖಚಿತವಾಗಿದೆ. ಅವರೇ ತಮ್ಮ ಒಂದು ಪದ್ಯದಲ್ಲಿ

*ಚಿದಂಬರಮಿದಂ ಪುರಂ ಪ್ರಥಿತಮೇವ ಪುಣ್ಯಸ್ಥಲಂ*
*ಸುತಾಶ್ಚ ವಿನಯೋಜ್ಜ್ವಲಾಃ ಸುಕೃತಯಶ್ಚ ಕಾಶ್ಚಿತ್ ಕೃತಾಃ ।*
*ವಯಾಂಸಿ ಮಮ ಸಪ್ತತೇರುಪರಿ ನೈವ ಭೋಗೇ ಸ್ಪೃಹಾ*
*ನ ಕಿಂಚಿದಹಮರ್ಥಯೇ ಶಿವಪದಂ ದಿದೃಕ್ಷೇ ಪರಮ್ ॥* ಎಂದು

ಅವರ ವಯಸ್ಸು ಎಪ್ಪತ್ತು ವರ್ಷಗಳಿಗೆ ಮೀರಿತ್ತೆಂದು ಹೇಳಿದ್ದಾರೆ.

ಅವರ ತಮ್ಮನ ಮೊಮ್ಮಗನೂ ಶಿಷ್ಯನೂ ಆಗಿದ್ದ ನೀಲಕಂಠದೀಕ್ಷಿತನು ***ಶಿವಲೀಲಾರ್ಣವ***ವೆಂಬ ಮಹಾಕಾವ್ಯದಲ್ಲಿ - 'ದ್ವಾ ಸಪ್ತತಿಂ ಪ್ರಾಪ್ಯ ಸಮಾಃ ಪ್ರಬಂಧಾನ್ ಶತಂ ವ್ಯಧಾದಪ್ಪಯದೀಕ್ಷಿತೇಂದ್ರಃ' ಎಂಬ ಪದ್ಯದಲ್ಲಿ 'ಎಪ್ಪತ್ತೆರಡನೆಯ ವಯಸ್ಸಿಗೆ ಅಪ್ಪಯ್ಯ ದೀಕ್ಷಿತರು ನೂರು ಕೃತಿಗಳನ್ನು ಬರೆದಿದ್ದರೆಂದು ಹೇಳಿರುವುದನ್ನು ಇಲ್ಲಿ ಗಮನಿಸಬಹುದು. ನೂರು ಶ್ರೇಷ್ಠ ಸಂಸ್ಕೃತದ ಗ್ರಂಥಗಳನ್ನು ರಚಿಸಿದ ಅಪ್ಪಯ್ಯ ದೀಕ್ಷಿತರು ಅಸಾಧಾರಣ ವಿದ್ವಾಂಸರಾಗಿದ್ದರೆಂಬುದು ಸುಸ್ಪಷ್ಟ. ವೇದಾಂತ, ಮೀಮಾಂಸಾ, ಅಲಂಕಾರ, ವ್ಯಾಕರಣ ಇತ್ಯಾದಿಗಳಲ್ಲಿ ಅಪ್ರತಿಮ ಪಾಂಡಿತ್ಯದಿಂದ ಬೆಳಗಿ ತಮ್ಮ ಸಮಕಾಲಿಕರಾದ ಅನೇಕ ಪಂಡಿತರನ್ನು ವಾದಭೂಮಿಯಲ್ಲಿ ಅವರು ಸೋಲಿಸಿದ್ದರು. ಅವರ ಖ್ಯಾತಿ ಎಷ್ಟು ಹಬ್ಬಿತ್ತೆಂದರೆ ದೇಶದ ಶ್ರೇಷ್ಠ ವಿದ್ವಾಂಸರೆಲ್ಲಾ ತಮ್ಮನ್ನು ಅಪ್ಪಯ್ಯ ದೀಕ್ಷಿತರ ಪರಿಚಿತರು, ಅಥವಾ ಅವರ ಶಿಷ್ಯರು ಎಂದು ಕರೆದುಕೊಳ್ಳಲು ಹಾತೊರೆಯುತ್ತಿದ್ದರು. ಇದನ್ನು ನೀಲಕಂಠದೀಕ್ಷಿತರು '***ಶಿವ ಲೀಲಾರ್ಣವ***'ದ ಮೊದಲನೆಯ ಸರ್ಗದಲ್ಲಿ ಹೇಳಿದ್ದಾರೆ -

*ಯಂ ವಿದ್ಮ ಇತಿ, ಯದ್ಗ್ರಂಥಾನಭ್ಯಸ್ಯಾಮೋಽಖಿಲಾನಿತಿ ।*
*ಯಸ್ಯ ಶಿಷ್ಯಾ ಸ್ಮ ಇತಿ ಚ ವಿಕತ್ಥಂತೇ ವಿಪಶ್ಚಿತಃ ॥*

ಅಪ್ಪಯ್ಯ ದೀಕ್ಷಿತರ ಗ್ರಂಥಗಳ ಕೊನೆಯಲ್ಲಿ ಕಂಡುಬರುವ ಪುಷ್ಪಿಕೆಗಳಿಂದಲೂ, ನೀಲಕಂಠ ದೀಕ್ಷಿತಾದಿಗಳ ಗ್ರಂಥಗಳಿಂದಲೂ ಅವರ ಕೃತಿಗಳ ಸಂಖ್ಯೆ ನೂರಕ್ಕೂ ಹೆಚ್ಚಾಗಿತ್ತೆಂದು ತಿಳಿದು ಬರುತ್ತದೆ. ಅವುಗಳಲ್ಲಿ ಪ್ರಮುಖವಾದುವು ಯಾವುವೆಂದರೆ-

(೧) ಅಲಂಕಾರ ಶಾಸ್ತ್ರದಲ್ಲಿ ***ಕುವಲಯಾನಂದ, ಚಿತ್ರಮೀಮಾಂಸಾ ಮತ್ತು ವೃತ್ತಿವಾರ್ತಿಕ.***

(೨) ವೇದಾಂತ ಶಾಸ್ತ್ರದಲ್ಲಿ **ಕಲ್ಪತರುಪರಿಮಳ, ಸಿದ್ಧಾಂತಲೇಶ ಸಂಗ್ರಹ, ನಯಮಂಜರೀ, ನ್ಯಾಯರಕ್ಷಾಮಣಿ**

(೩) ಮೀಮಾಂಸೆಯಲ್ಲಿ **ವಿಧಿರಸಾಯನ**

(೪) ಶೈವ ಸಿದ್ಧಾಂತದಲ್ಲಿ **ಶಿವಾರ್ಕಮಣಿದೀಪಿಕಾ**

(೫) ವ್ಯಾಕರಣದಲ್ಲಿ **ವಾದನಕ್ಷತ್ರಮಾಲಾ.**

ಇವಲ್ಲದೆ ಅನೇಕ ಸ್ತೋತ್ರಗಳನ್ನೂ, ವ್ಯಾಖ್ಯಾನಗಳನ್ನೂ ಅಪ್ಪಯ್ಯ ದೀಕ್ಷಿತರು ರಚಿಸಿದ್ದಾರೆ. ಶ್ರೀ ವೇದಾಂತ ದೇಶಿಕರ ಯಾದವಾಭ್ಯುದಯ ಕಾವ್ಯಕ್ಕೆ ಅವರು ರಚಿಸಿರುವ ವ್ಯಾಖ್ಯಾನವು ಹೃದ್ಯವೂ ಪ್ರೌಢವೂ ಆಗಿದೆ. ಅಪ್ಪಯ್ಯ ದೀಕ್ಷಿತರು ರಚಿಸಿದ ಗ್ರಂಥಗಳನ್ನು ಅರ್ಥೈಸಬಲ್ಲವನು ಪಂಡಿತ, ಅರ್ಥೈಸಲಾರದವನು ಅಪಂಡಿತ ಎಂದು ಜನರೆಲ್ಲಾ ಆಗ ತಿಳಿಯುತ್ತಿದ್ದರೆಂಬುದು ಸುಪ್ರಸಿದ್ಧ ವೈಯಾಕರಣರಾದ ಭಟ್ಟೋಜಿ ದೀಕ್ಷಿತರ –

*ಅಪ್ಪಯ್ಯ ದೀಕ್ಷಿತೇಂದ್ರಾನ್ ಅಶೇಷವಿದ್ಯಾಗುರೂನಹಂ ವಂದೇ ।*
*ಯತ್ಕೃತಿಬೋಧಾಬೋಧೌ ವಿದ್ವದವಿದ್ವದ್ವಿಭಾಜಕೋಪಾಧೀ ॥*

ಎಂಬ ಪದ್ಯದಿಂದ ತಿಳಿದು ಬರುತ್ತದೆ.

ಅಪ್ಪಯ್ಯದೀಕ್ಷಿತರು ಅದ್ವೈತಮತಾನುಯಾಯಿಗಳಾದ್ದರಿಂದ ಅವರಿಗೆ ಶಿವ-ವಿಷ್ಣು ಇಬ್ಬರಲ್ಲೂ ಭಕ್ತಿ ಸಮಾನವಾಗಿತ್ತು. ಶಿವನು ಹೆಚ್ಚೋ ವಿಷ್ಣು ಹೆಚ್ಚೋ ಎಂಬ ವಾದಕ್ಕೆ ಅವರಲ್ಲಿ ಪ್ರಸಕ್ತಿಯಿರಲಿಲ್ಲ.

*ವಿಷ್ಣುರ್ವಾ ಶಂಕರೋ ವಾ ಶ್ರುತಿಶಿಖರಗಿರಾಮಸ್ತು ತಾತ್ಪರ್ಯಭೂಮಿಃ*
*ನಾಸ್ಮಾಕಂ ತತ್ರ ವಾದಃ ಪ್ರಸರತಿ ಕಿಮಪಿ ಸ್ಫಷ್ಟಮದ್ವೈತಭಾಜಾಮ್ ॥*

ಎಂದು ಅವರೇ ಶಿವಾರ್ಕಮಣಿದೀಪಿಕೆಯ ಆರಂಭದಲ್ಲಿ ಹೇಳುತ್ತಾರೆ.

## ವರದರಾಜಸ್ತವ

ಕಾಂಚೀನಗರವು ಅತ್ಯಂತ ಪ್ರಾಚೀನ ಕಾಲದಿಂದಲೂ ಭಾರತೀಯ ಸಂಸ್ಕೃತಿಯ ಕೇಂದ್ರವಾಗಿರುವ ನಗರ. ವೇಗವತೀ (ವೈಗೈ) ನದಿಯ ದಡದಲ್ಲಿರುವ ಈ ನಗರವು ತಮಿಳುನಾಡಿನಲ್ಲಿದೆ. ತಮಿಳಿನ ಸಾಹಿತ್ಯದ ಅನೇಕ ಕಾವ್ಯಗಳ ವಸ್ತು ಕಾಂಚೀ ಪಟ್ಟಣಕ್ಕೆ ಸಂಬಂಧಿಸಿದೆ. ಪಲ್ಲವ ಸಾಮ್ರಾಜ್ಯದ ರಾಜಧಾನಿಯಾಗಿ ಮೆರೆದ ಈ ನಗರವು ಶಿವ (ಏಕಾಮ್ರೇಶ್ವರ), ವಿಷ್ಣು (ವರದರಾಜ) ಮತ್ತು ಶಕ್ತಿ (ಕಾಮಾಕ್ಷಿ)ಗಳ ನಿವಾಸ

ಸ್ಥಾನವಾಗಿರುವುದರಿಂದ ಅತ್ಯಂತ ಪವಿತ್ರ. ಕಾಂಚೀಕಾಮಕೋಟಿಪೀಠಕ್ಕೂ ಸ್ಥಾನವಾಗಿ ಪ್ರಸಿದ್ಧ ಯಾತ್ರಾಸ್ಥಳವೂ ಪ್ರಮುಖ ವಿದ್ಯಾ ಕೇಂದ್ರವೂ ಆಗಿದೆ. ಇಲ್ಲಿನ ಶ್ರೀ ವರದರಾಜಸ್ವಾಮಿಯ ದರ್ಶನಕ್ಕಾಗಿ ಇಂದಿಗೂ ಸಹಸ್ರಾರು ಭಕ್ತರು ಪ್ರತಿದಿನವೂ ಕಾಂಚೀಪಟ್ಟಣಕ್ಕೆ ಬರುತ್ತಾರೆ. ಅಪ್ಪಯ್ಯ ದೀಕ್ಷಿತರು ವಸಂತತಿಲಕಾವೃತ್ತದ ನೂರು ಪದ್ಯಗಳಿಂದ ವರದರಾಜನನ್ನು ಸ್ತುತಿಸಿ ಅವನ ಅಕಂಪಾನುಕಂಪಕ್ಕೆ ಪಾತ್ರರಾಗಿದ್ದಾರೆ.

ಈ ಸ್ತೋತ್ರದ ಭಾಷೆ ಲಲಿತವೂ ಅಲಂಕಾರಭೂಷಿತವೂ ಆಗಿದೆ. ಆದರೂ ಶುತ್ಯರ್ಥಗರ್ಭಿತವಾದ ಅನೇಕ ವಿಷಯಗಳನ್ನು ಸ್ತೋತ್ರದಲ್ಲಿ ಅಳವಡಿಸಿರುವುದರಿಂದ ಕೆಲವು ಪದ್ಯಗಳನ್ನು ಅರಿತುಕೊಳ್ಳಲು ವಿದ್ವಾಂಸರೂ ತಿಣುಕುವಂತಾಗುತ್ತದೆ. ಪ್ರಾಯಶಃ ಈ ವಿಷಯವು ತಿಳಿದುಬಂದುದರಿಂದ ಅಪ್ಪಯ್ಯ ದೀಕ್ಷಿತರು ತಾವೇ ಈ ಸ್ತೋತ್ರಕ್ಕೆ ವ್ಯಾಖ್ಯಾನವನ್ನು ಬರೆದು ಗ್ರಂಥಾರ್ಥಗಳನ್ನು ವಿಶದಪಡಿಸಿದ್ದಾರೆ.

'*ವರದರಾಜಸ್ತವ*'ದ ಪದ್ಯಗಳು ***ವೃತ್ತಿವಾರ್ತಿಕ***ದಲ್ಲೂ ***ಕುವಲಯಾನಂದ***ದಲ್ಲೂ ಉದಾಹೃತವಾಗಿವೆ. ಆದ್ದರಿಂದ ಮೊದಲು ವರದರಾಜಸ್ತವ ರಚಿತವಾಗಿದ್ದಿರಬೇಕು. ಅದರ ವ್ಯಾಖ್ಯಾನದಲ್ಲಿ ಕುವಲಯಾನಂದ ಉಲ್ಲಿಖಿತವಾಗಿದೆ. ಆದ್ದರಿಂದ ಮೂಲದ ರಚನೆಯಾದ ಬಹುಕಾಲಾನಂತರ ವ್ಯಾಖ್ಯಾನವನ್ನು ರಚಿಸಿರಬೇಕೆಂದು ಊಹಿಸಬಹುದಾಗಿದೆ. ಈ ವ್ಯಾಖ್ಯಾನದಲ್ಲಿ ಅಲಂಕಾರಶಾಸ್ತ್ರದ ಅನೇಕ ಸಮಸ್ಯೆಗಳನ್ನು ಚರ್ಚಿಸಲಾಗಿದ್ದು ಅಪ್ಪಯ್ಯ ದೀಕ್ಷಿತರ ಪರಿಪಕ್ವ ಪಾಂಡಿತ್ಯವು ಇಲ್ಲಿ ಗೋಚರಿಸುತ್ತದೆ.

ಕನ್ನಡಿಗರು ವರದರಾಜಸ್ತವವನ್ನು ಓದಿ ಅದರ ಮಾಧುರ್ಯವನ್ನೂ ಲಾಲಿತ್ಯವನ್ನೂ ಗಾಂಭೀರ್ಯವನ್ನೂ ಅನುಭವಿಸಿ ತನ್ಮೂಲಕ ಶ್ರೀ ವರದರಾಜಸ್ವಾಮಿಯನ್ನು ಭಕ್ತಿಪೂರ್ವಕವಾಗಿ ಆರಾಧಿಸಿ ಅವನ ಅನುಗ್ರಹಕ್ಕೆ ಪಾತ್ರರಾಗಲೆಂಬ ಉದ್ದೇಶದಿಂದ ಪ್ರಕೃತ ಪುಸ್ತಕದಲ್ಲಿ ಸಂಸ್ಕೃತಮೂಲವನ್ನು ಕನ್ನಡ ಲಿಪಿಯಲ್ಲಿ ಕೊಟ್ಟು ಅದರ ಅನುವಾದ-ವಿವರಣೆಯನ್ನು ಕನ್ನಡದಲ್ಲಿ ನೀಡಲಾಗಿದೆ. ಭಕ್ತ ಮಹಾಶಯರು ಈ ಪುಟ್ಟ ಹೊತ್ತಿಗೆಯನ್ನು ಸ್ವಾಗತಿಸುವರೆಂದು ನಂಬಿದ್ದೇನೆ.

ಇಂತು ಸುಧೀವಿಧೇಯ

***ಎಚ್.ವಿ. ನಾಗರಾಜರಾವ್***

ಅಪ್ಪಯ್ಯದೀಕ್ಷಿತವಿರಚಿತ

# ವರದರಾಜಸ್ತವಃ

(ಮಂಗಳ ಪದ್ಯ)

**ಉದ್ಘಾಟ್ಯ ಯೋಗಕಲಯಾ ಹೃದಯಾಬ್ಜಕೋಶಂ**
**ಧನ್ಯೈಶ್ಚಿರಾದಪಿ ಯಥಾರುಚಿ ಗೃಹ್ಯಮಾಣಃ ।**
**ಯಃ ಪ್ರಸ್ಫುರತ್ಯವಿರತಂ ಪರಿಪೂರ್ಣರೂಪಃ**
**ಶ್ರೇಯಃ ಸ ಮೇ ದಿಶತು ಶಾಶ್ವತಿಕಂ ಮುಕುಂದಃ ॥ ೧ ॥**

**ಅನುವಾದ :** ಯೋಗಾಭ್ಯಾಸದಿಂದ ಗಳಿಸಿದ ನೈಪುಣ್ಯದಿಂದ ತಾವರೆಯ ಮೊಗ್ಗಿನಂತಿರುವ ತಮ್ಮ ಹೃದಯವನ್ನು ವಿಕಾಸಗೊಳಿಸಿ, ಅನಂತಕಾಲದಿಂದ ಧನ್ಯರು ಅಲ್ಲಿ ಅವರವರ ಅಭಿರುಚಿಗೆ ಅನುಗುಣವಾಗಿ ಸಾಕ್ಷಾತ್ಕರಿಸಿ ಕೊಳ್ಳುತ್ತಿದ್ದರೂ ಸದಾ ಪರಿಪೂರ್ಣರೂಪನಾಗಿ ಹೊಳೆಯುತ್ತಿರುವ ಮುಕುಂದನು ನನಗೆ ಶಾಶ್ವತ ಶ್ರೇಯಸ್ಸನ್ನು ನೀಡಲಿ.

**ವಿವರಣೆ :** 'ಪದ್ಮಕೋಶಪ್ರತೀಕಾಶಂ ಹೃದಯಂ' ಎಂದು ಶ್ರುತಿಯಲ್ಲಿ ಹೇಳಲಾಗಿದೆ. ಯೋಗಸಮಾಧಿಯಲ್ಲಿ ಸ್ಥಿತರಾದವರು ಆ ಹೃದಯವನ್ನು ಅರಳಿಸಿ ಅಲ್ಲಿರುವ ಪರಮಾನಂದನಿಧಿಯಾದ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡು ಆನಂದಾನುಭೂತಿಯನ್ನು ಪಡೆಯುತ್ತಿದ್ದಾರೆ. ಲೆಕ್ಕವಿಲ್ಲದಷ್ಟು ಯೋಗಿಗಳು ಯಥೇಚ್ಛವಾಗಿ ಹೀಗೆ ಆನಂದವನ್ನು ಸೂರೆಗೊಳ್ಳುತ್ತಿದ್ದರೂ ಪರಮಾತ್ಮ ಸದಾ ಪರಿಪೂರ್ಣನಾಗಿಯೇ ಇರುತ್ತಾನೆ. ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ಎಂಬ ಶ್ರುತಿಯೂ ಇದನ್ನು ಸಮರ್ಥಿಸುತ್ತದೆ. ಹೀಗೆ ಶಾಶ್ವತ ಆನಂದನಿಧಿಯ ರೂಪದಲ್ಲಿರುವ ಭಗವಂತನು ಮಾತ್ರ ಶಾಶ್ವತ ಬ್ರಹ್ಮಾನಂದವನ್ನು ಕೊಡಲು

ಸಮರ್ಥನೆಂದು ಕವಿಯು ಅದನ್ನು ದಯಪಾಲಿಸಲು ಅವನನ್ನು ಕೋರುತ್ತಿದ್ದಾನೆ. ಮುಕುಂದ ಎಂದರೆ ನವನಿಧಿಗಳಲ್ಲಿ ಒಂದು. ಮಹಾಪದ್ಮಶ್ಚ ಪದ್ಮಶ್ಚ ಶಂಖೋ ಮಕರಕಚ್ಛಪೌ । ಮುಕುಂದಃ ಕುಂದನೀಲೌ ಚ ಎಂದು ಅಮರಕೋಶ ತಿಳಿಸುತ್ತದೆ. ಇದರಿಂದ ಪರಮಾತ್ಮನಿಗೂ ನಿಧಿಗೂ ಇರುವ ಸಾದೃಶ್ಯವು ಧ್ವನಿತವಾಗುತ್ತದೆ. ಬೇರೆ ನಿಧಿಗಳಿಂದ ವಸ್ತುಗಳನ್ನು ಸ್ವೀಕರಿಸಿದರೆ ಅವು ಖಾಲಿಯಾಗುತ್ತವೆ. ಪರಮಾತ್ಮನಿಂದ ಆನಂದವನ್ನು ಎಷ್ಟು ಸ್ವೀಕರಿಸಿದರೂ ಅವನು ಪರಿಪೂರ್ಣನಾಗಿಯೇ ಇರುತ್ತಾನೆ ಎಂದು ವರ್ಣಿಸಿರುವುದರಿಂದ ವಿರೋಧಾಭಾಸ ಎಂಬ ಅಲಂಕಾರ.

**ಜಾತೋ ನ ವೇತ್ತಿ ಭಗವನ್ನ ಜನಿಷ್ಯಮಾಣಃ**
**ಪಾರಂ ಪರಂ ಪರಮಪೂರುಷ ತೇ ಮಹಿಮ್ನಃ ।**
**ತಸ್ಯ ಸ್ತುತೌ ತವ ತರಂಗಿತಸಾಹಸಿಕ್ಯಃ**
**ಕಿಂ ಮಾದೃಶೋ ಬುಧಜನಸ್ಯ ಭವೇನ್ನ ಹಾಸ್ಯಃ ॥ ೨ ॥**

**ಅನುವಾದ :** ಭಗವನ್, ಪರಮಪುರುಷ, ನಿನ್ನ ಮಹಿಮೆಯ ಪಾರವನ್ನು ಇದುವರೆಗೆ ಹುಟ್ಟಿದವರಾರೂ ಅರಿಯರು, ಮುಂದೆ ಹುಟ್ಟುವವರಂತೂ ಅರಿಯಲಾರರು. ಅಂಥ ಮಹಾಮಹಿಮನಾದ ನಿನ್ನ ಸ್ತುತಿಯನ್ನು ಮಾಡಲು ಸಾಹಸವನ್ನು ಮಾಡುತ್ತಿರುವ ನನ್ನಂಥವನು ಪಂಡಿತರ ಅಪಹಾಸ್ಯಕ್ಕೆ ಈಡಾಗದೆ ಇರುವನೇ ?

**ವಿವರಣೆ :** ಭಗವಂತನ ಮಹಿಮೆ ಅನಂತವಾದದ್ದು. ''ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'' ಎಂಬ ಶ್ರುತಿಯು ಹೇಳುವಂತೆ ಮಾತುಗಳಿಗೂ ಮನಸ್ಸಿಗೂ ಪ್ರಾಪ್ಯವಲ್ಲದ್ದು ಭಗವನ್ಮಹಿಮೆ. ಬ್ರಹ್ಮೇಂದ್ರಾದಿ ದೇವತೆಗಳೂ ಕೂಡ ಆ ಮಹಿಮೆಯನ್ನು ಹೊಗಳಲು ಅಶಕ್ತರು. ಹೀಗಿರುವಾಗ ಮನುಷ್ಯರ ಪಾಡೇನು ? ತನ್ನ ಕೈಯಿಂದ ಸಾಧ್ಯವಾಗದ ಕೆಲಸವನ್ನು ಮಾಡಲು ಹೊರಟಿರುವ ಕವಿಯನ್ನು ಕಂಡು ಪಂಡಿತರು ಹಾಸ್ಯ ಮಾಡುವುದು ನಿಶ್ಚಿತವೆಂದು ಇಲ್ಲಿ ಹೇಳಿದೆ. ಏನೇ ಆದರೂ ಭಗವಂತನ ಸ್ತೋತ್ರವು ಪಾಪನಾಶಕವೂ ಪುಣ್ಯಸಾಧಕವೂ ಆದ್ದರಿಂದ ಅದನ್ನು

ರಚಿಸುವುದು ಪವಿತ್ರ ಕರ್ತವ್ಯವೆಂದು ಕವಿ ಪ್ರವೃತ್ತನಾಗಿರುವನೆಂದು ತಿಳಿಯಬೇಕು.

**ಮನ್ಯೇ ನಿಜಸ್ಖಲನದೋಷಮವರ್ಜನೀಯ**
**ಮನ್ಯಸ್ಯ ಮೂರ್ಧ್ನಿ ವಿನಿವೇಶ್ಯ ಬಹಿರ್ಬುಭೂಷುಃ।**
**ಆವಿಶ್ಯ ದೇವ ರಸನಾನಿ ಮಹಾಕವೀನಾಂ**
**ದೇವೀ ಗಿರಾಮಪಿ ತವ ಸ್ತವಮಾತನೋತಿ ॥ ೩ ॥**

**ಅನುವಾದ :** ದೇವ, ವಾಗ್ದೇವಿ ಎನಿಸಿದ ಸರಸ್ವತಿಯೂ (ನಿನ್ನ ಸ್ತೋತ್ರ ಮಾಡಲು ಪ್ರಯತ್ನಿಸಿದಾಗ) ತಾನು ತಪ್ಪು ಮಾಡುವುದು ಅನಿವಾರ್ಯವೆಂದು ತಿಳಿದು ಆ ತಪ್ಪನ್ನು ಬೇರೆಯವರ ತಲೆಯ ಮೇಲೆ ಹೊರಿಸಿ ತಾನು ಪಾರಾಗಲು ಅಪೇಕ್ಷಿಸಿ, ಮಹಾಕವಿಗಳ ನಾಲಿಗೆಯ ಮೇಲೆ ನಿಂತು ನಿನ್ನ ಸ್ತುತಿಯನ್ನು ಮಾಡುತ್ತಿರುತ್ತಾಳೆ.

**ವಿವರಣೆ :** ಎಲ್ಲ ಮಾತುಗಳಿಗೆ, ಎಲ್ಲ ಪ್ರಮಾಣಗಳಿಗೆ ಮೀರಿದ ಮಹಿಮೆ ಪರಮಾತ್ಮನಲ್ಲಿ ಇರುವುದರಿಂದ, ಆ ಮಹಿಮೆಯ ವರ್ಣನೆ ಯಾರು ಮಾಡಿದರೂ ಅಪೂರ್ಣವೇ. ಹೇಗೆ ಆ ಮಹಿಮೆಯನ್ನು ಬಣ್ಣಿಸಲು ಹೊರಟರೂ, ಅದರಲ್ಲಿ ತಪ್ಪಾಗುವುದು ಅನಿವಾರ್ಯ. ಈ ರೀತಿಯಾದ ದೋಷಕ್ಕೆ ತಾನು ಈಡಾಗಬಾರದು ಎಂಬ ಅಭಿಪ್ರಾಯದಿಂದಲೇ ಸರಸ್ವತಿಯು ತಾನೇ ಸಾಕ್ಷಾತ್ತಾಗಿ ಪರಮಾತ್ಮನ ಸ್ತೋತ್ರವನ್ನು ಮಾಡದೆ ಮಹಾಕವಿಗಳ ನಾಲಿಗೆಯ ಮೇಲೆ ಆವಿಷ್ಟಳಾಗಿ ತನ್ಮೂಲಕ ಭಗವತ್‌ಸ್ತುತಿಯನ್ನು ಮಾಡುತ್ತಾಳೆ. ಹೀಗೆ ಮಾಡಿದಾಗ ದೋಷ ಉಂಟಾದರೂ ಅದು ಆ ಕವಿಗಳ ಪಾಲಿಗೆ ಹೋಗುತ್ತದೆ, ಸರಸ್ವತಿಗೆ ತಟ್ಟುವುದಿಲ್ಲ. ಕವಿಗಳು ಭಗವತ್‌ಸ್ತೋತ್ರಗಳನ್ನು ರಚಿಸುವಾಗ ಸಾಕ್ಷಾತ್ ಸರಸ್ವತಿಯೇ ಅವರ ನಾಲಿಗೆಯ ಮೇಲೆ ನರ್ತಿಸುತ್ತಿರುತ್ತಾಳೆ ಎಂದು ಇಲ್ಲಿನ ತಾತ್ಪರ್ಯ. ಸರಸ್ವತಿಯು ಕವಿಗಳ ನಾಲಿಗೆಯ ಮೇಲೆ ನಿಂತು ಸ್ತೋತ್ರ ಮಾಡಲು ತಾನು ದೋಷವನ್ನು ತಪ್ಪಿಸಿಕೊಳ್ಳಬೇಕೆನ್ನುವುದು ಕಾರಣವಲ್ಲ. ಅದೇ ಕಾರಣವೆಂದು ಇಲ್ಲಿ ಹೇಳಿರುವುದರಿಂದ ಕಾರಣೋತ್ಪ್ರೇಕ್ಷಾಲಂಕಾರ.

ನೇತಸ್ತಥಾಪಿ ತವ ನಿರ್ಮಮಲೋಕಸೇವ್ಯಾಂ
ಮೂರ್ತಿಂ ಮದಾವಲಮಹೀಧರರತ್ನಭೂಷಾಮ್ ।
ವೈಕುಂಠ ವರ್ಣಯಿತುಮಸ್ಮಿ ಧೃತಾಭಿಲಾಷ-
ಸ್ತ್ವನ್ನಾಮರೂಪಗುಣಚಿಂತನಲಾಭಲೋಭಾತ್ ॥ ೪ ॥

**ಅನುವಾದ :** ಜಗನ್ನಾಯಕ, ವೈಕುಂಠ, ಮಮಕಾರರಹಿತರಾದ ಮುನಿಗಳಿಂದ ಸೇವಿಸಲ್ಪಡುವ, ಹಸ್ತಿಶೈಲಕ್ಕೆ ರತ್ನಾಭರಣದಂತಿರುವ ನಿನ್ನ ಮೂರ್ತಿಯನ್ನು ವರ್ಣಿಸಲು, ನಿನ್ನ ನಾಮ-ರೂಪ-ಗುಣಗಳ ಚಿಂತನೆಯ ಲಾಭ ದೊರಕುವುದೆಂಬ ಲೋಭದಿಂದ, ಆಶೆಯನ್ನು ಹೊತ್ತಿರುವವನಾಗಿದ್ದೇನೆ.

**ವಿವರಣೆ :** ಅಹಂಕಾರ-ಮಮಕಾರಗಳನ್ನು ತ್ಯಜಿಸಿದ ಮುನಿಗಳು ಶ್ರೀ ವರದರಾಜನ ದಿವ್ಯಮಂಗಳವಿಗ್ರಹವನ್ನು ಪೂಜಿಸುತ್ತಾರೆ. ಕಾಂಚಿಯ ಬಳಿಯಲ್ಲಿ ವಿರಾಜಮಾನವಾಗಿರುವ ಹಸ್ತಿಶೈಲವೆಂದು ಪ್ರಖ್ಯಾತವಾದ ಬೆಟ್ಟದ ಮೇಲೆ ರತ್ನಾಭರಣದಂತೆ ಶ್ರೀ ವರದರಾಜಮೂರ್ತಿ ಕಂಗೊಳಿಸುತ್ತಿದೆ. ಆ ವರದರಾಜನನ್ನು ವರ್ಣಿಸಲು ತೊಡಗಿದಾಗ ಪರಮಾತ್ಮನ ನಾಮಸ್ಮರಣೆ, ರೂಪದ ಸಾಕ್ಷಾತ್ಕಾರ, ಗುಣಗಳ ಚಿಂತನೆ ಸತತವಾಗಿ ಆಗುವುದೆಂಬ ಆಸೆಯೇ ಅಪ್ಪಯ್ಯದೀಕ್ಷಿತರು ಸ್ತೋತ್ರವನ್ನು ರಚಿಸುವುದಕ್ಕೆ ಮುಖ್ಯ ಕಾರಣ. ಕವಿತೆಯನ್ನು ರಚಿಸಬೇಕಾದರೆ ವಿಷಯದಲ್ಲಿ ಮನಸ್ಸು ಏಕಾಗ್ರವಾಗಿ ನಿಲ್ಲಬೇಕಾಗಿರುವುದರಿಂದ ಪರಮಾತ್ಮನ ಧ್ಯಾನವನ್ನೇ ಮಾಡಿದಂತೆ ಆಗುವುದೆಂದು ಕವಿಯ ಅಭಿಪ್ರಾಯ. ವರದರಾಜನ ಮೂರ್ತಿಯೇ ರತ್ನಭೂಷಣವೆಂದು ವರ್ಣಿಸಿರುವುದರಿಂದ ಅಭೇದರೂಪಕಾಲಂಕಾರ.

ಮನ್ಯೇ ಸೃಜಂತ್ವಭಿನುತಿಂ ಕವಿಪುಂಗವಾಸ್ತೇ
ತೇಭ್ಯೋ ರಮಾರಮಣ ಮಾದೃಶ ಏವ ಧನ್ಯಃ
ತ್ವದ್ವರ್ಣನೇ ಧೃತರಸಃ ಕವಿತಾತಿಮಾಂದ್ಯಾ-
ದ್ಯಸ್ತತ್ತದಂಗಚಿರಚಿಂತನಭಾಗ್ಯಮೇತಿ ॥ ೫ ॥

**ಅನುವಾದ :** ರಮಾಪತಿಯೆನಿಸಿದ ಭಗವಂತ, ಶ್ರೇಷ್ಠ ಕವಿಗಳು ನಿನ್ನ

ಸ್ತುತಿಗಳನ್ನು ಸುಲಭವಾಗಿ ರಚಿಸಲಿ. ಅವರಿಗಿಂತ ನನ್ನಂಥ (ಮಂದ ಬುದ್ಧಿಯೇ) ಉತ್ತಮ ಎಂದು ಭಾವಿಸುತ್ತೇನೆ. ಏಕೆಂದರೆ, ಕವಿತೆಯ ರಚನೆಯಲ್ಲಿ ಅತಿಯಾಗಿ ತಡವಾಗುವುದರಿಂದ ನನಗೆ ಒಂದೊಂದು ಅಂಗವನ್ನೂ ದೀರ್ಘಕಾಲ ಧ್ಯಾನಿಸುವ ಭಾಗ್ಯ ಒದಗುತ್ತದೆ.

**ವಿವರಣೆ** : ಮಹಾಕವಿಗಳು 'ವಶ್ಯವಾಕ್' ಎನಿಸುತ್ತಾರೆ. ಅವರ ಇಚ್ಛಾನುಸಾರವಾಗಿ ಅಸ್ಖಲಿತವಾಗಿ ವಾಕ್ಪ್ರವಾಹ ಹರಿಯುತ್ತದೆ. ಅವರು ಬೇಗಬೇಗನೇ ಸ್ತೋತ್ರಗಳನ್ನು ರಚಿಸಿ ಮುಗಿಸುತ್ತಾರೆ. ಅವರಿಗಿಂತ ಮಂದಬುದ್ಧಿಯ ಸಾಮಾನ್ಯಕವಿಗಳೇ ಧನ್ಯರು. ಏಕೆಂದರೆ ಅವರು ಬೇಗ ಬೇಗ ಕವಿತೆಯನ್ನು ಬರೆಯಲಾರರು. ಭಗವಂತನ ಒಂದೊಂದು ಗುಣವನ್ನು ವರ್ಣಿಸುವಾಗಲೂ ಅದರ ಬಗೆಗೆ ದೀರ್ಘಕಾಲ ಯೋಚಿಸಿ, ಅರ್ಥವನ್ನೂ ಪದಗಳನ್ನೂ ಹುಡುಕಿ ಹುಡುಕಿ ಜೋಡಿಸುತ್ತಾರೆ. ಈ ಕಾರಣದಿಂದ ಭಗವಚ್ಚಿಂತನೆಯನ್ನು ಹೆಚ್ಚುಕಾಲ ನಡೆಸುವವರು ಸಾಮಾನ್ಯಬುದ್ಧಿಯ ಕವಿಗಳೇ, ಅವರೇ ಕೃತಾರ್ಥರು ಎಂದು ಕವಿಯ ಭಾವನೆ.

ನಾವು ಸಾಧಾರಣ ಬುದ್ಧಿಯುಳ್ಳ ಸಾಮಾನ್ಯ ಜನರೆಂದು ಭಗವಂತನ ಸ್ತೋತ್ರವನ್ನು ಮಾಡದೆ ಇರಬಾರದು. ಭಗವಂತನಿಗೆ ನಮ್ಮ ಭಕ್ತಿ ಮುಖ್ಯ ಕವಿತಾಪ್ರತಿಭೆಯಲ್ಲ ಎಂದು ಇಲ್ಲಿ ಧ್ವನಿತವಾಗುತ್ತದೆ. ದೋಷವಾದ ಬುದ್ಧಿಮಾಂದ್ಯವನ್ನು ಇಲ್ಲಿ ಭಗವಚ್ಚಿಂತನೆಗೆ ಅನುಕೂಲವೆಂದು ಗುಣವಾಗಿ ತೋರಿಸಿರುವುದರಿಂದ ಲೇಶಾಲಂಕಾರ. 'ಲೇಶಃ ಸ್ಯಾದ್ದೋಷ ಗುಣಯೋ-ರ್ಗುಣದೋಷತ್ವ ಕಲ್ಪನಮ್' ಎಂದು ಅದರ ಲಕ್ಷಣ.

**ಕಾಂಚೀ ಮಹಾರ್ಘಮಣಿಕಾಂಚನಧಾಮಚಿತ್ರಾ**
**ವಿಶ್ವಂಭರಾಂ ವಿಬುಧನಾಥ ವಿಭೂಷಯಂತೀ ।**
**ಭಾತಾ ಗಜಾದ್ರಿಶಿಖರೇ ತವ ಭಕ್ತಚಿಂತಾ-**
**ರತ್ನೇನ ರಾಜತಿತರಾಂ ಶುಭವಿಗ್ರಹೇಣ ॥ ೬ ॥**

**ಅನುವಾದ** : ಎಲ್ಲ ದೇವತೆಗಳ ನಾಯಕನಾದ ವರದರಾಜನೆ,

ಅನರ್ಘ್ಯವಾದ ಮಣಿಗಳಿಂದಲೂ ಚಿನ್ನದಿಂದಲೂ ಕಟ್ಟಿರುವ ಮನೆಗಳಿಂದ ಶೋಭಿಸುವ ಕಾಂಚೀನಗರಿಯು ಭೂಮಂಡಲಕ್ಕೇ ಅಲಂಕಾರವಾಗಿದ್ದು, ಭಕ್ತರಿಗೆ ಚಿಂತಾಮಣಿಯಂತೆ ಸಕಲಾರ್ಥಪ್ರದವೂ, ಹಸ್ತಿಶೈಲದ ಶಿಖರದಲ್ಲಿ ಹೊಳೆಯುವುದೂ ಆದ ನಿನ್ನ ದಿವ್ಯಮಂಗಳ ವಿಗ್ರಹದಿಂದ ಇನ್ನೂ ಹೆಚ್ಚಾಗಿ ವಿರಾಜಿಸುತ್ತಿದೆ.

**ವಿವರಣೆ :** ಸೃಷ್ಟಿಕಾಲದಲ್ಲಿ ವಿಘ್ನನಿವಾರಣೆಗಾಗಿ ಬ್ರಹ್ಮನು ಪೂಜಿಸಿದ ಕ್ಷೇತ್ರ ಕಾಂಚೀಪುರ. 'ಕ' ಎಂದರೆ ಬ್ರಹ್ಮ, ಅವನಿಂದ ಅಂಚಿತವಾದುದು ಎಂದರೆ ಪೂಜಿಸಲ್ಪಟ್ಟದ್ದು ಕಾಂಚೀ.

*ಕೇನ ಸ್ವಯಂಭುವಾ ತೇನ ಸಾ ಪುರೀ ನಿತ್ಯಮಂಚಿತಾ ।*
*ತತಃ ಕಾಂಚೀತಿ ವಿಖ್ಯಾತಾ ಚತುರ್ವರ್ಗಫಲಪ್ರದಾ ॥*

ಎಂದು ಶಿವಪುರಾಣಸಂಗ್ರಹದಲ್ಲಿ ಹೇಳಲಾಗಿದೆ. ಈ ಪಟ್ಟಣವು ಜಗತ್ತಿಗೇ ಒಡವೆ. ಅದರ ಬಳಿ ಶೋಭಿಸುವ ಹಸ್ತಿಶೈಲದ ಶಿಖರದ ಮೇಲೆ ಶ್ರೀ ವರದರಾಜಸ್ವಾಮಿಯ ವಿಗ್ರಹವು ವಿರಾಜಮಾನವಾಗಿದೆ. ಇದರಿಂದ ಕಾಂಚೀಪುರದ ಕಾಂತಿಯು ನೂರುಮಡಿ ಹೆಚ್ಚಿದೆಯೆಂದು ಇಲ್ಲಿ ಕವಿಯ ತಾತ್ಪರ್ಯವಾಗಿದೆ. ದಿಗ್ಗಜಗಳೆಲ್ಲಾ ಬಂದು ವಿಷ್ಣುವನ್ನು ಇಲ್ಲಿ ಅರ್ಚಿಸಿದ ಕಾರಣ ಈ ಬೆಟ್ಟ ಹಸ್ತಿಶೈಲವೆಂಬ ಹೆಸರನ್ನು ಪಡೆದಿದೆ.

*ದಿಙ್ನಾಗೈರರ್ಚಿತಸ್ತತ್ರ ಪುರಾ ವಿಷ್ಣುಃ ಸನಾತನಃ ।*
*ತತೋ ಹಸ್ತಿಗಿರಿರ್ನಾಮ ಖ್ಯಾತಿರಾಸೀನ್ಮಹಾಗಿರೇಃ ॥*

ಈ ಪುರಾಣಶ್ಲೋಕವು ಇದಕ್ಕೆ ಪ್ರಮಾಣವಾಗಿದೆ.

**ಅಸ್ಯಾಂ ಭವಂತಮಭಿತಃ ಸ್ಥಿತದುಗ್ಧಸಿಂಧೌ**
**ಮಧ್ಯೇ ತ್ರಯೀಮಯಮಹಾರವಮಂಡಲಸ್ಯ ।**
**ಪಶ್ಯನ್ನಧಃಕೃತಚತುರ್ಮುಖವಿಷ್ಟಪಾಯಾಂ**
**ಧಾಮತ್ರಯೀಽಪಿ ಕುತುಕಂ ವಿಜಹಾತಿ ವಿದ್ವಾನ್ ॥ ೭ ॥**

**ಅನುವಾದ :** ಈ ಕಾಂಚೀಪಟ್ಟಣದ ಸಮೀಪದಲ್ಲೇ ಹಾಲಿನ ಕಡಲಿನಂಥ

ವೇಗವತೀ ನದಿಯು ಹರಿಯುತ್ತಿದೆ. ವೇದತ್ರಯಗಳ ಗಂಭೀರಧ್ವನಿ ಮಂಡಲದ ಮಧ್ಯದಲ್ಲಿ ಈ ಪಟ್ಟಣ ಶೋಭಿಸುತ್ತಿದೆ. ತನ್ನ ಪವಿತ್ರತೆಯಿಂದ ಬ್ರಹ್ಮನ ಲೋಕವನ್ನೂ ಈ ಪುರವು ಕೆಳಗೆ ಹಾಕಿದೆ. ಇಂಥ ಕಾಂಚೀನಗರಿಯಲ್ಲಿ ಕಂಗೊಳಿಸುವ ನಿನ್ನನ್ನು ಕಂಡ ಜ್ಞಾನಿಯು (ಶ್ವೇತದ್ವೀಪ, ಸೂರ್ಯಮಂಡಲ, ಪರಮಪದ ಎಂಬ) ಮೂರು ಧಾಮಗಳಲ್ಲೂ ಆಸಕ್ತಿಯನ್ನು ಬಿಡುತ್ತಾನೆ.

**ವಿವರಣೆ :** ಭಗವಂತನ ಮೂರು ಧಾಮಗಳು, ಎಂದರೆ ನಿವಾಸ ಸ್ಥಾನಗಳು ಪುರಾಣಗಳಲ್ಲಿ ಪ್ರಸಿದ್ಧವಾಗಿವೆ. ಅವುಗಳಲ್ಲಿ ಮೊದಲನೆಯದು ಕ್ಷೀರಸಾಗರದ ಮಧ್ಯದಲ್ಲಿ ಇರುವ ಶ್ವೇತದ್ವೀಪ. ಇದನ್ನು ಕೂರ್ಮಪುರಾಣದಲ್ಲಿ

*ಶಾಕದ್ವೀಪಂ ಸಮಾವೃತ್ಯ ಕ್ಷೀರೋದಃ ಸಾಗರಃ ಸ್ಥಿತಃ ।*
*ಶ್ವೇತದ್ವೀಪಶ್ಚ ತನ್ಮಧ್ಯೇ ನಾರಾಯಣಸಮಾಶ್ರಯಃ ॥*

ಎಂದು ವರ್ಣಿಸಿದ್ದಾರೆ. ಭಗವಂತನ ಎರಡನೆಯ ಧಾಮ ರವಿಮಂಡಲ. ''ಸ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ'' ಎಂದು ಶ್ರುತಿಯಲ್ಲಿ ಹೇಳಿರುವುದು ಇದಕ್ಕೆ ಪ್ರಮಾಣವಾಗಿದೆ. ಪುರಾಣಗಳಲ್ಲಿಯೂ

*ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ*
*ನಾರಾಯಣಃ ಸರಸಿಜಾಸನಸಂನಿವಿಷ್ಟಃ ।*
*ಕೇಯೂರವಾನ್ ಮಕರಕುಂಡಲವಾನ್ ಕಿರೀಟೀ*
*ಹಾರೀ ಹಿರಣ್ಮಯವಪುರ್ಧೃತಶಂಖಚಕ್ರಃ ॥*

ಇತ್ಯಾದಿ ಶ್ಲೋಕಗಳಿಂದ ಭಗವಂತನ ನಿವಾಸವನ್ನು ಆದಿತ್ಯಮಂಡಲದ ಮಧ್ಯದಲ್ಲಿ ಧ್ಯಾನಿಸಬೇಕೆಂದು ನಿರೂಪಿಸಲಾಗಿದೆ. ಬ್ರಹ್ಮಸದನದ ಊರ್ಧ್ವಭಾಗದಲ್ಲಿರುವ ತೃತೀಯಧಾಮವನ್ನು ಪರಮಪದ ಎಂದು ಕರೆಯುತ್ತಾರೆ.

ಈ ಮೂರು ಧಾಮಗಳಲ್ಲಿರುವ ಗುಣವೂ ಕಾಂಚೀಪುರದಲ್ಲಿದೆ. ಇಲ್ಲಿ ಹರಿಯುವ ಶುಭ್ರಜಲದ ನದಿ ವೇಗವತೀ (ಈಗ ಇದನ್ನು ತಮಿಳಿನಲ್ಲಿ ವೇಗೈ ಎನ್ನುತ್ತಾರೆ). ಇದು ಕ್ಷೀರಸಮುದ್ರಕ್ಕೆ ಸಮಾನ. ಪಟ್ಟಣದ ಇನ್ನೊಂದು

ದಿಕ್ಕಿನಲ್ಲಿ ಸ್ಕಾಂದೀ ಎಂಬ ಹೊಳೆ ಹರಿಯುತ್ತದೆ. ಇವೆರಡರ ಮಧ್ಯದ ಭೂಮಿಗೆ ಅಂತರ್ವೇದೀ ಎಂದು ಹೆಸರು. ಅಲ್ಲಿರುವ ಕಾಂಚಿಯು ಶ್ವೇತದ್ವೀಪಕ್ಕೆ ಸಮಾನವೆಂದು ಬ್ರಹ್ಮಾಂಡಪುರಾಣದಲ್ಲಿ ಹೇಳಲಾಗಿದೆ.

*ಅಸ್ತಿ ವಾಸಿಷ್ಠಗೋಕ್ಷೀರಧಾರಾಕೃತಮಹಾಪಗಾ ।*
*ಕ್ಷೀರಾಪಗೇತಿ ವಿಖ್ಯಾತಾ ನಾಮ್ನಾ ತೇನ ಜಗತ್ತ್ರಯೇ ॥*
*ತಸ್ಯಾ ದಕ್ಷಿಣತಃ ಕಾಂಚ್ಯಾ ನಾತಿದೂರೇ ತರಂಗಿಣೀ ।*
*ಸ್ಕಂದಾಭಿಷೇಕಸಂಭೂತಾ ಸ್ಕಾಂದೀತಿ ಪ್ರಥಿತಾಪಗಾ ॥*
*ಅಂತರಾಲಂ ತಯೋರ್ಮಧ್ಯಮಂತರ್ವೇದೀತಿ ವಿಶ್ರುತಮ್ ।*
*ಕಾಂಚೀಸ್ಥಾನಮಿದಂ ವಿದ್ಧಿ ಖ್ಯಾತಂ ದ್ವಾದಶನಾಮಭಿಃ ॥*

ಇದರಿಂದ ಕಾಂಚೀಪಟ್ಟಣವನ್ನು ನೋಡಿದಮೇಲೆ ಶ್ವೇತದ್ವೀಪದ ದರ್ಶನ ಅನಾವಶ್ಯಕ ಎಂದು ಸೂಚಿತವಾಗುತ್ತದೆ.

ಆದಿತ್ಯಮಂಡಲದ ಗುಣವೂ ಕಾಂಚೀಪಟ್ಟಣದಲ್ಲಿದೆ. ಸೂರ್ಯನಿಗೆ ತ್ರಯೀತನು ಎಂಬ ಹೆಸರಿದೆ. ತ್ರಯೀ ಎಂದರೆ ಋಗ್ಯಜಸ್ಸಾಮಗಳೆಂಬ ಮೂರು ವೇದಗಳು. ಅವೇ ಸೂರ್ಯನ ಶರೀರ ಎಂದು ಶಾಸ್ತ್ರಗಳಲ್ಲಿ ಹೇಳಿದೆ. ಕಾಂಚಿಯಲ್ಲಿ ವೇದತ್ರಯದ ಗಂಭೀರಘೋಷ ಸದಾ ಕೇಳಿಬರುತ್ತಿರುವುದರಿಂದ ಅಲ್ಲಿ ಆದಿತ್ಯಮಂಡಲಸಾದೃಶ್ಯವಿದೆ. ಇದರಿಂದ ಭಗವಂತನ ದ್ವಿತೀಯಧಾಮದ ಸನ್ನಿಧಿಯೂ ಇಲ್ಲಿದೆ.

ಬ್ರಹ್ಮಲೋಕಕ್ಕಿಂತ ಶ್ರೇಷ್ಠವಾದ ವಿಷ್ಣುಸ್ಥಾನವು ವರದರಾಜನ ಸನ್ನಿಧಾನದಿಂದ ಕಾಂಚಿಯಲ್ಲಿದೆ. ಇದರಿಂದ ಪರಮಪದವೂ ಇಲ್ಲಿದ್ದಂತಾಯಿತು. ಹೀಗೆ ಕಾಂಚೀಪಟ್ಟಣದ ದರ್ಶನದಿಂದಲೇ ಸಕಲಾರ್ಥ ಸಿದ್ಧಿಯಾಗುವುದರಿಂದ ಧಾಮತ್ರಯಪ್ರಾಪ್ತಿಯಲ್ಲಿ ಭಕ್ತರಿಗೆ ಅನಾಸಕ್ತಿ ಉಂಟಾದರೂ ಆಶ್ಚರ್ಯವಿಲ್ಲವೆಂದು ಈ ಪದ್ಯದ ಭಾವ. ವಿದ್ವಾಂಸರಿಗೆ ಶ್ವೇತದ್ವೀಪಾದಿಗಳ ದರ್ಶನದಲ್ಲಿ ಆಸಕ್ತಿಯ ತ್ಯಾಗ ವಸ್ತುತಃ ಉಂಟಾಗದೆ ಇದ್ದರೂ, ಹಾಗೆ ವರ್ಣಿಸಿರುವುದರಿಂದ ಅತಿಶಯೋಕ್ತಿ ಎಂಬ ಅಲಂಕಾರ. ಅದರಿಂದ ಕಾಂಚೀಪಟ್ಟಣದ ಮಹಿಮಾತಿಶಯವು ಧ್ವನಿತವಾಗುತ್ತದೆ.

ಅಸ್ಯಾಮಮೇಯಗುಣಪುರ್ಯಪರಾಜಿತಾಯಾ-
ಮಶ್ವತ್ಥವರ್ಯಜುಷಿ ದಿವ್ಯಸರಃ ಸಮೀಪೇ।
ಮಧ್ಯೇ ಹಿರಣ್ಮಯಗೃಹಂ ಮಹಿಷೀಯುತಂ ತ್ವಾಂ
ದೃಷ್ಟ್ವಾ ಜನೋ ನ ಪುನರೇತಿ ಭವಾಂತರಾರ್ತಿಮ್ ॥ ೮ ॥

**ಅನುವಾದ :** ಈ ಕಾಂಚೀಪಟ್ಟಣವು ಅಪರಿಮಿತವಾದ ಗುಣಗಳಿಂದ ತುಂಬಿದೆ. ಇದು ಅಪರಾಜಿತಾ (ಬೇರಾವ ಪಟ್ಟಣಗಳಿಂದ ಸೌಂದರ್ಯದಲ್ಲಿ ಸೋಲುವುದಿಲ್ಲ) ಎಂದು ಪ್ರಸಿದ್ಧವಾಗಿದೆ. ಇಲ್ಲಿರುವ ದಿವ್ಯಸರಸ್ಸಿನ ಸಮೀಪದಲ್ಲಿ ಅಶ್ವತ್ಥವೃಕ್ಷವಿದೆ. ಈ ಪಟ್ಟಣದ ಮಧ್ಯದಲ್ಲಿ ಸುವರ್ಣ ಭವನದಲ್ಲಿ ಪತ್ನಿಯೊಡನೆ ವಿರಾಜಮಾನನಾಗಿರುವ ನಿನ್ನನ್ನು (ಶ್ರೀ ವರದರಾಜನನ್ನು) ನೋಡಿದವರು ಮತ್ತೆ ಸಂಸಾರದ ಶೋಕಗಳಿಗೆ ಸಿಕ್ಕುವುದಿಲ್ಲ.

**ವಿವರಣೆ :** 'ಕಾಂಚೀ ತಥಾ ಶ್ರೇಷ್ಠತಮಾ ಪುರೀಣಾಮ್' ಎಂದು ವಾಮನ ಪುರಾಣದಲ್ಲಿ ಉಕ್ತವಾಗಿರುವ ಪ್ರಕಾರ ಜಗತ್ತಿನ ಯಾವ ಪಟ್ಟಣವೂ ಕಾಂಚಿಗಿಂತ ಮೇಲಲ್ಲ. ಆದ್ದರಿಂದ ಕಾಂಚೀ ಅಪರಾಜಿತಾ ಎನಿಸಿದೆ. ಇಲ್ಲಿ ಅನಂತಸರೋವರವೆಂಬ ಪುರಾಣಪ್ರಸಿದ್ಧವಾದ ಸರಸ್ಸಿದೆ. ಇದರ ಬಳಿ ಪ್ರಾಚೀನ ಅಶ್ವತ್ಥವೃಕ್ಷ. ಆ ಸರೋವರದ ಸಮೀಪದಲ್ಲಿ ದಿವ್ಯವಾದ ದೇವಾಲಯದಲ್ಲಿ ಪತ್ನೀಸಹಿತನಾದ ವರದರಾಜನ ದರ್ಶನವನ್ನು ಪಡೆದವರಿಗೆ ಪುನರ್ಜನ್ಮವಿಲ್ಲ. ಇಲ್ಲಿರುವ ಅಪರಾಜಿತಾ ಎಂಬ ಪದ ತುಂಬಾ ಅರ್ಥವತ್ತಾಗಿದೆ.

"ಬ್ರಹ್ಮಲೋಕೇ ತೃತೀಯಸ್ಯಾಮಿತೋ ದಿವಿ ತದೈರಂಮದೀಯಂ ಸರಸ್ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಂ ಹಿರಣ್ಮಯಮ್" ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿರುವುದರಿಂದ ಪರಬ್ರಹ್ಮನ ಪಟ್ಟಣಕ್ಕೆ ಅಪರಾಜಿತಾ ಎಂದು ಹೆಸರೆಂದು ತಿಳಿದುಬರುತ್ತದೆ. ಅದರ ಸಮೀಪದಲ್ಲಿ ಸರಸ್ಸು ಮತ್ತು ಅಶ್ವತ್ಥಗಳಿವೆಯೆಂದು ಶ್ರುತಿಯು ಹೇಳುತ್ತಿರುವುದರಿಂದ ಈ ಎಲ್ಲ ಲಕ್ಷಣಗಳಿರುವ ಕಾಂಚೀಪುರಿಯು

ಬ್ರಹ್ಮಪುರಿಗೆ ಸಮಾನವೆಂದು ಕವಿ ಸೂಚಿಸಿದ್ದಾನೆ. ವರದರಾಜಸ್ವಾಮಿಯ ದರ್ಶನವು ಬ್ರಹ್ಮಸಾಕ್ಷಾತ್ಕಾರಕ್ಕೆ ಸಮಾನವೆಂದು ಇಲ್ಲಿ ಧ್ವನಿತವಾಗುತ್ತದೆ. ಇದರಿಂದ ಭಕ್ತರಿಗೆ ಪುನರಾವೃತ್ತಿರಹಿತ ಬ್ರಹ್ಮಲೋಕಾವಾಪ್ತಿಯು ವರದರಾಜನ ಕೃಪೆಯಿಂದ ಆಗುವುದೆಂಬುದು ಈ ಪದ್ಯದ ತಾತ್ಪರ್ಯ.

*ಯೋ ವೈ ತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಮ್ ।*
*ತಸ್ಮೈ ಬ್ರಹ್ಮ ಚ ಬ್ರಹ್ಮಾ ಚ ಆಯುಃ ಕೀರ್ತಿಂ ಪ್ರಜಾಂ ದದುಃ ॥*

ಎಂಬ ಶ್ರುತಿವಾಕ್ಯವನ್ನು ಅನುಸಂಧಾನ ಮಾಡಿಕೊಳ್ಳಬೇಕು.

**ಸಂಪ್ರಾಪ್ಯ ದುಗ್ಧತಟಿನೀವಿರಜಾಂ ವಿಶುದ್ಧಾಃ**
**ಸಂತೋ ಭವದ್ ಭಜನದಾಂ ಪದಮಾಗತಾಸ್ತೇ ।**
**ತ್ವತ್ಪಾದತೋಯತುಲಸೀಕುಸುಮೇಷು ಲಗ್ನಂ**
**ಗಂಧಂ ರಸಂ ಚ ಗರುಡಧ್ವಜ ತೇ ಲಭಂತೇ ॥ ೯ ॥**

**ಅನುವಾದ :** ಹೇ ಗರುಡಧ್ವಜ ವರದರಾಜ, ನಿನ್ನ ಭಕ್ತಿಯನ್ನು ನೀಡುವ ಪರಿಶುದ್ಧವಾದ ಕ್ಷೀರನದಿಯೆನಿಸಿದ ವೇಗವತಿಯನ್ನು ದಾಟಿ ನಿನ್ನ ಸ್ಥಳವಾದ ಕಾಂಚಿಗೆ ಬಂದ ಭಕ್ತರು ನಿನ್ನ ಪಾದತೀರ್ಥದಲ್ಲಿ ಸೇರಿರುವ ತುಳಸೀದಳ ಮತ್ತು ಹೂಗಳಲ್ಲಿ ಅಂಟಿಕೊಂಡಿರುವ ನಿನ್ನ ದಿವ್ಯಗಂಧವನ್ನೂ ರಸವನ್ನೂ ಪಡೆಯುತ್ತಾರೆ.

**ವಿವರಣೆ :** ಈ ಪದ್ಯದಲ್ಲಿ ಕಾಂಚಿಗೆ ಹೋಗಿ ವರದರಾಜನ ಪಾದದರ್ಶನವನ್ನು ಪಡೆಯುವುದಕ್ಕೂ, ಪರಮಪದವೆನಿಸಿದ ವೈಕುಂಠವನ್ನು ಸೇರಿ ಮೋಕ್ಷವನ್ನು ಪಡೆಯುವುದಕ್ಕೂ ಕವಿಯು ಪದಪ್ರಯೋಗ ಚಾತುರ್ಯದಿಂದ ಅಭೇದವನ್ನು ಕಲ್ಪಿಸಿದ್ದಾನೆ. ವಿರಜಾ ಎಂಬ ನದಿಯನ್ನು ದಾಟಿ, ಸಂಪೂರ್ಣವಾಗಿ ಪಾಪಗಳನ್ನು ಕಳೆದುಕೊಂಡು, ಶ್ರೇಷ್ಠಭಕ್ತರು ಭಗವಂತನ ಪಾದಸೇವೆಯನ್ನು ಸಾಕ್ಷಾತ್ತಾಗಿ ಮಾಡಿ ಮೋಕ್ಷಸುಖವನ್ನು ಅನುಭವಿಸುತ್ತಾರೆ ಎಂಬ ಅರ್ಥವೂ ಈ ಪದ್ಯದಲ್ಲಿ ತೋರುತ್ತದೆ. ''ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈವಾತ್ಯೇತಿ'' ಎಂಬ ಶ್ರುತಿವಾಕ್ಯವನ್ನು

ಅನುಸಂಧಾನ ಮಾಡಿಕೊಂಡು ಕವಿ ಈ ಪದ್ಯವನ್ನು ರಚಿಸಿದ್ದಾನೆ. ಅರ್ಚಿರಾದಿಮಾರ್ಗದಿಂದ ವಿರಜಾನದಿಯನ್ನು ದಾಟುವಾಗ ಸೂಕ್ಷ್ಮ ಶರೀರವನ್ನೂ ತ್ಯಜಿಸುವುದರಿಂದ 'ವಿಶುದ್ಧಾಃ' ಎಂಬ ಪದಕ್ಕೂ ವಿಶಿಷ್ಟವಾದ ಅರ್ಥ ಬರುತ್ತದೆ. ದುಗ್ಧತಟನೀವಿರಜಾಂ ಎಂಬಲ್ಲಿರುವ ರೂಪಕಾಲಂಕಾರ ದಿಂದ ವೇಗವತೀ ನದಿಗಿರುವ ಪ್ರಾಶಸ್ತ್ಯವೂ ದ್ಯೋತಿತವಾಗುತ್ತದೆ.

**ಸೌವರ್ಣಸಾಲವಲಯಾನ್ ಸಮನುಪ್ರವಿಶ್ಯ**
**ಕೋಶಾನಿವ ತ್ರಿದಶನಾಯಕ ಕೋಽಪಿ ಧನ್ಯಃ ।**
**ಆನಂದವಲ್ಲ್ಯುದಿತ ದಿವ್ಯಫಲಾನುರೂಪಂ**
**ರೂಪಂ ತ್ವದೀಯಮವಲೋಕಯತೇಽಭಿರೂಪಮ್ ॥ ೧೦ ॥**

**ಅನುವಾದ :** ದೇವತಾ ಸಾರ್ವಭೌಮ ವರದರಾಜನೆ, ಸುವರ್ಣ ನಿರ್ಮಿತವಾದಂತೆ ತೋರುವ ಪಂಚಪ್ರಾಕಾರಗಳನ್ನು, ಆನಂದವಲ್ಲಿಯಲ್ಲಿ ವರ್ಣಿತವಾದ ಪಂಚಕೋಶಗಳನ್ನು ಪ್ರವೇಶಿಸಿ ಮುಂದುವರಿಯುವ ಹಾಗೆ ದಾಟಿ, ಅಲ್ಲಿ ಬಣ್ಣಿಸಿರುವ ದಿವ್ಯವಾದ ಆನಂದಕ್ಕೆ ಅನುರೂಪವಾದ ನಿನ್ನ ಪರಮ ರಮಣೀಯ ರೂಪವನ್ನು ಯಾವನೋ ಧನ್ಯನು ಮಾತ್ರ ಕಾಣುತ್ತಾನೆ.

**ವಿವರಣೆ :** ತೈತ್ತಿರೀಯೋಪನಿಷತ್ತಿನ ಆನಂದವಲ್ಲಿಯಲ್ಲಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ ಎಂಬ ಐದು ಕೋಶಗಳನ್ನು ವರ್ಣಿಸಲಾಗಿದೆ. ಆನಂದಮಯಕೋಶವೇ ಪರಬ್ರಹ್ಮವೆಂದು ಕೆಲವರ ಅಭಿಪ್ರಾಯ. ಮತ್ತೆ ಕೆಲವರು 'ತಸ್ಯ ಪುಚ್ಛಂ ಪ್ರತಿಷ್ಠಾ' ಇತ್ಯಾದಿ ಉಪನಿಷದ್ವಾಕ್ಯಗಳನ್ನು ಆಧಾರವಾಗಿಟ್ಟುಕೊಂಡು ಆನಂದಮಯಕ್ಕಿಂತ ಮುಂದೆ ಪರಬ್ರಹ್ಮವೆಂದು ಹೇಳುತ್ತಾರೆ. ಆದ್ದರಿಂದ ಇಲ್ಲಿ ಸೌವರ್ಣಸಾಲವಲಯಗಳು ನಾಲ್ಕು ಅಥವಾ ಐದು ಎಂದು ಮತಭೇದದಿಂದ ಅವರವರಿಗೆ ಬೇಕಾದಂತೆ ಅರ್ಥಮಾಡಿಕೊಳ್ಳಬಹುದು. ಉಪನಿಷತ್ತಿನಲ್ಲಿ ಪ್ರತಿಪಾದಿತವಾದ ನಿರತಿಶಯಾನಂದರೂಪ ಬ್ರಹ್ಮವೂ ಶ್ರೀವರದರಾಜನೂ ಒಂದೇ ಎಂದು ಇಲ್ಲಿ ವಿವಕ್ಷಿತವಾದ ಅರ್ಥ.

ಚಿನ್ನದ ಪ್ರಾಕಾರಗಳಿಗೂ ಅನ್ನಮಯಾದಿ ಕೋಶಗಳಿಗೂ ಸಾದೃಶ್ಯವನ್ನು ವರ್ಣಿಸಿರುವುದರಿಂದ ಉಪಮಾಲಂಕಾರ.

**ಮಾತಂಗಶೈಲಮಣಿಶೃಂಗಮಹಾವಿಮಾನ-**
**ಸೋಪಾನಪರ್ವಚತುರುತ್ತರವಿಂಶತಿರ್ಯಾ ।**
**ತಾಮೇವ ತತ್ತ್ವವಿತತಿಂ ಪುರುಷೋ ವಿಲಂಘ್ಯ**
**ಪಶ್ಯನ್ ಭವಂತಮುಪಯಾತಿ ಭವಾಬ್ಧಿಪಾರಮ್ ॥ ೧೧ ॥**

**ಅನುವಾದ :** ಹಸ್ತಿಶೈಲದ ಮಣಿಶಿಖರದಲ್ಲಿರುವ ಮಹಾವಿಮಾನದ ಸಮೀಪಕ್ಕೆ ಹೋಗಲು ಇರುವ ಇಪ್ಪತ್ತನಾಲ್ಕು ಮೆಟ್ಟಲುಗಳೇ ಇಪ್ಪತ್ತನಾಲ್ಕು ತತ್ತ್ವಗಳು. ಆ ಸೋಪಾನಪಂಕ್ತಿಯನ್ನು ದಾಟಿದ ಮಾನವನು ನಿನ್ನನ್ನು ಕಂಡು ಸಂಸಾರ ಸಾಗರದ ಆಚೆಯ ದಡವನ್ನು ಸೇರುತ್ತಾನೆ.

**ವಿವರಣೆ :** ಸಾಂಖ್ಯದರ್ಶನದಲ್ಲಿ ಮೂಲಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಪಂಚತನ್ಮಾತ್ರ, ಪಂಚಮಹಾಭೂತ, ಪಂಚಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಮನಸ್ಸು ಎಂಬ ಇಪ್ಪತ್ತನಾಲ್ಕು ತತ್ತ್ವಗಳನ್ನೂ, ಇವುಗಳನ್ನು ಅರಿತು ಕೊನೆಗೆ ಮೋಕ್ಷವನ್ನು ಪಡೆಯುವ 'ಪುರುಷ' ಎಂಬ ಇಪ್ಪತ್ತೈದನೆಯ ತತ್ತ್ವವನ್ನೂ ಪ್ರತಿಪಾದಿಸಿದ್ದಾರೆ. ಶ್ರೀವರದರಾಜನ ದೇವಾಲಯದ ಇಪ್ಪತ್ತ ನಾಲ್ಕು ಮೆಟ್ಟಲುಗಳೇ ಮೇಲೆ ಹೇಳಿದ ಇಪ್ಪತ್ತನಾಲ್ಕು ತತ್ತ್ವಗಳು. ಅವುಗಳನ್ನು ಏರಿಹೋಗುವ ಮನುಷ್ಯನೇ ಪುರುಷ. ಅವನಿಗೆ ದೊರೆಯುವ ವರದರಾಜ ದರ್ಶನವೇ ಮೋಕ್ಷ ಎಂದು ಇಲ್ಲಿ ಕವಿ ವರ್ಣಿಸಿದ್ದಾನೆ. ಭವ (ಸಂಸಾರ)ವೇ ಅಬ್ಧಿ (ಸಮುದ್ರ) ಎಂದು ವರ್ಣಿಸಿರುವುದರಿಂದ ರೂಪಕಾಲಂಕಾರ.

**ನಾಪಾರಿ ಲಬ್ಧುಮರವಿಂದಭುವಾಪಿ ಸಾಕ್ಷಾದ್**
**ಯಂ ಪೂರ್ವಮೀಶ್ವರ ವಿನಾ ಹಯಮೇಧಪುಣ್ಯಮ್ ।**
**ಅನ್ಯೈರನಾಪ್ಯ ಸ ಕಥಂ ನವಪುಣ್ಯಕೋಟಿಂ**
**ಪ್ರಾಪ್ಯಸ್ತ್ವದಾಕೃತಿವಿಲೋಕನಜಃ ಪ್ರಮೋದಃ ॥ ೧೨ ॥**

**ಅನುವಾದ :** ಜಗದೀಶ್ವರನೆ, ನಿನ್ನ ದಿವ್ಯಾಕಾರದರ್ಶನದಿಂದ ಉಂಟಾಗುವ

ಆನಂದವನ್ನು ಪಡೆಯಲು ಅಶ್ವಮೇಧಯಾಗದ ಪುಣ್ಯವಿಲ್ಲದೆ ಸಾಕ್ಷಾತ್ ಬ್ರಹ್ಮನಿಗೂ ಸಾಧ್ಯವಾಗಲಿಲ್ಲ. ಹೀಗಿರುವಾಗ, ನವಪುಣ್ಯಕೋಟಿಯನ್ನು ಮೊದಲು ಪಡೆಯದೆ ಬೇರೆಯವರಿಗೆ ಅಂಥ ಆನಂದವು ಹೇಗೆ ದೊರಕುತ್ತದೆ ?

**ವಿವರಣೆ** : ಹಿರಣ್ಯಗರ್ಭನೆನಿಸಿದ ಬ್ರಹ್ಮನಿಗೂ ಭಗವಂತನ ದರ್ಶನವು ಸುಮ್ಮನೆ ಸಿಗಲಿಲ್ಲ. ಅವನೂ ಅನೇಕ ಯಜ್ಞಯಾಗಾದಿಗಳನ್ನು ಮಾಡಿ ಅದರ ಫಲವಾಗಿ ಪರಮಾತ್ಮ ಸಾಕ್ಷಾತ್ಕಾರವನ್ನು ಪಡೆದನೆಂದು ಬ್ರಹ್ಮಾಂಡ ಪುರಾಣದಲ್ಲಿ ಹೇಳಿದೆ –

*ಪುರಾ ಕೃತಯುಗೇ ರಾಜನ್ ಜಂಬೂದ್ವೀಪೇ ತು ದಕ್ಷಿಣೇ ।*
*ಭಾಗೇ ಭಾರತವರ್ಷೇ ಚ ಕ್ಷೇತ್ರೇ ಸತ್ಯವ್ರತಾಭಿಧೇ ॥*
*ಚೈತ್ರೇ ಮಾಸಿ ಸಿತೇ ಪಕ್ಷೇ ಚತುರ್ದಶ್ಯಾಂ ತಿಥೌ ಮುನೇ ।*
*ಶೋಭನೇ ಹಸ್ತನಕ್ಷತ್ರೇ ರವಿವಾರಸಮನ್ವಿತೇ ॥*
*ವಪಾಹೋಮೇ ಪ್ರವೃತ್ತೇ ತು ಪ್ರಾತಃಸವನಕಲ್ಪಿತೇ ।*
*ಧಾತುರುತ್ತರವೇದ್ಯಾಂ ತು ಪ್ರಾದುರಾಸೀಜ್ಜನಾರ್ದನಃ ॥*
*ಆರಾಧಿತೋ ಜಗದ್ಧಾತ್ರಾ ಹಯಮೇಧೇನ ತದ್ಽನೌ ॥*

ಬ್ರಹ್ಮನಿಗೇ ಈ ಪರಿಸ್ಥಿತಿ ಇರುವಾಗ ಬೇರೆಯವರು ಅನೇಕ ಕೋಟಿ ಸಂಖ್ಯೆಯ ಪುಣ್ಯಗಳಿಲ್ಲದೆ ಹೇಗೆ ತಾನೆ ಭಗವಂತನ ದರ್ಶನವನ್ನು ಪಡೆಯಲು ಸಾಧ್ಯ ? ಎಂಬುದು ಇಲ್ಲಿ ಮೊದಲು ತೋರಿಬರುವ ಅರ್ಥ.

ಕವಿ ಇಲ್ಲಿ 'ಪುಣ್ಯಕೋಟಿ' ಎಂಬ ಪದವನ್ನು ವಿಶೇಷಾರ್ಥದಲ್ಲಿ ಬಳಸಿದ್ದಾನೆ. ಶ್ರೀವರದರಾಜಸ್ವಾಮಿಯ ದೇವಾಲಯದ ಮೇಲಿರುವ ವಿಮಾನಕ್ಕೆ ಪುಣ್ಯಕೋಟಿ ಎಂಬ ಶಾಸ್ತ್ರೀಯ ಹೆಸರಿದೆ. ಮೊದಲು ಈ ಪುಣ್ಯಕೋಟಿ ವಿಮಾನವನ್ನು ನೋಡದೆ ಶ್ರೀವರದರಾಜನ ದಿವ್ಯಮಂಗಳ ವಿಗ್ರಹದ ದರ್ಶನ ಸಾಧ್ಯವಿಲ್ಲ, ಸಾಧುವೂ ಅಲ್ಲ ಎಂದು ಸೂಚಿಸುವುದು ಕವಿಯ ಉದ್ದೇಶ. ಸಕಲಯಜ್ಞಗಳನ್ನೂ ಮಾಡಿದ ಫಲವು ಭಕ್ತಿಯಿಂದ ವರದರಾಜನ ದರ್ಶನವನ್ನು ಮಾಡಿದವರಿಗೆ ದೊರಕುವುದರಲ್ಲಿ ಸಂದೇಹವಿಲ್ಲ ಎಂದು ಈ ಪದ್ಯದ ತಾತ್ಪರ್ಯ.

**ಪ್ರತ್ಯಙ್ಮುಖಂ ತವ ಗಜಾಚಲರಾಜ ರೂಪಂ**
**ಪ್ರತ್ಯಙ್ಮುಖಾಶ್ಚಿರತರಂ ನಯನೈರ್ನಿಪೀಯ ।**
**ಆಖ್ಯಾನಮಾಪ್ತವಚಸಾಮವಿತರ್ಕಣೀಯ–**
**ಮಾಶ್ಚರ್ಯಮೇತದಿತಿ ನಿಶ್ಚಯಮಾವಹಂತೇ ॥ ೧೩ ॥**

**ಅನುವಾದ :** ಹಸ್ತಿಶೈಲಾಧಿಪತಿ ವರದರಾಜ, ಪ್ರತ್ಯಙ್ಮುಖರಾದ ಭಕ್ತರು ಪ್ರತ್ಯಙ್ಮುಖವಾಗಿರುವ ನಿನ್ನ ರೂಪವನ್ನು ತಮ್ಮ ಕಣ್ಣುಗಳಿಂದ ಚೆನ್ನಾಗಿ ಸಾಕ್ಷಾತ್ಕರಿಸಿಕೊಂಡು, ತರ್ಕಕ್ಕೆ ಅತೀತವಾದ ವೇದವಚನಗಳಿಗೆ ವಿಷಯವಾದ ಆಶ್ಚರ್ಯವು ಇದೇ ಎಂದು ನಿಶ್ಚಯವನ್ನು ಮಾಡುತ್ತಾರೆ.

**ವಿವರಣೆ :** ಪ್ರತ್ಯಙ್ಮುಖ ಎಂಬ ಶಬ್ದವನ್ನು ಈ ಪದ್ಯದಲ್ಲಿ ಎರಡು ಅರ್ಥಗಳಲ್ಲಿ ಬಳಸಲಾಗಿದೆ. ವರದರಾಜನು ಪ್ರತ್ಯಙ್ಮುಖ, ಎಂದರೆ ಆ ವಿಗ್ರಹವು ಪಶ್ಚಿಮಾಭಿಮುಖವಾಗಿದೆ. ಭಕ್ತರು ಪ್ರತ್ಯಙ್ಮುಖರು, ಎಂದರೆ ಅಂತರ್ಮುಖರಾಗಿ ಅಂತರ್ಯಾಮಿಯಾದ ಪರಮಾತ್ಮನನ್ನು ಕಾಣಲು ಶಕ್ತರಾದವರು. ಕಠೋಪನಿಷತ್ತಿನಲ್ಲಿ ಹೇಳಿರುವಂತೆ –

*ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ*
*ತಸ್ಮಾತ್ ಪರಾಙ್ಪಶ್ಯತಿ ನಾಂತರಾತ್ಮನ್ ।*
*ಕಶ್ಚಿದ್ ಧೀರಃ ಪ್ರತ್ಯಗಾತ್ಮಾನಮೈಕ್ಷದ್*
*ಆವೃತ್ತಚಕ್ಷುರಮೃತತ್ವಮಿಚ್ಛನ್ ॥*

ಸೃಷ್ಟಿಯಲ್ಲಿ ಇಂದ್ರಿಯಗಳೆಲ್ಲಾ ಬಹಿರ್ಮುಖವಾಗಿವೆ. ಆದ್ದರಿಂದ ಪ್ರತಿಯೊಬ್ಬನೂ ಹೊರಗೆ ನೋಡುತ್ತಾನೆ. ಒಳಗಿರುವ ಆತ್ಮನನ್ನು ಯಾವನೂ ಕಾಣುವುದಿಲ್ಲ. ಯಾವನೋ ಧೀರನು ಮಾತ್ರ ಅಮೃತತ್ವವನ್ನು ಬಯಸಿ ಕಣ್ಣನ್ನು ಒಳಗೆ ತಿರುಗಿಸಿ ಪ್ರತ್ಯಗಾತ್ಮನನ್ನೂ ಕಾಣುತ್ತಾನೆ – ಎಂದು ಈ ಉಪನಿಷತ್ಪದ್ಯದ ತಾತ್ಪರ್ಯ. ಹಾಗೆ ಪ್ರತ್ಯಙ್ಮುಖರಾದವರು ವರದರಾಜಸ್ವಾಮಿಯ ದರ್ಶನವನ್ನು ಮಾಡುತ್ತಾರೆ. 'ಆಪ್ತವಚನ' ಎಂದು ಪ್ರಸಿದ್ಧವಾದ ವೇದಗಳು ಪ್ರತಿಪಾದಿಸುವ ಆಶ್ಚರ್ಯಮಯ ತತ್ತ್ವ ಇದೇ

ಎಂದು ಶ್ರೀ ವರದರಾಜನ ವಿಗ್ರಹವನ್ನು ಕಂಡು ಆ ಭಕ್ತರು ಉದ್ಗರಿಸುತ್ತಾರೆ. ಪಶ್ಚಿಮಾಭಿಮುಖವಾಗಿರುವ ವರದರಾಜವಿಗ್ರಹವನ್ನು ಕಾಣಲು ಭಕ್ತರು ಪೂರ್ವಾಭಿಮುಖವಾಗಿ ನಿಲ್ಲಬೇಕೆನ್ನುವುದು ಸ್ವಯಂಸಿದ್ಧ ವಿಷಯ. ಅವರೂ ಪ್ರತ್ಯಙ್ಮುಖರಾಗಿರುವಾಗ ದರ್ಶನವಾಗುವುದು ಆಶ್ಚರ್ಯ ಎಂದು ಶ್ಲೇಷದಿಂದ ಸಿದ್ಧವಾಗುತ್ತದೆ.

**ಯಸ್ಮಿನ್ ಜಹಾತ್ಯತಿಶಯೋಕ್ತಿರಲಂಕೃತಿತ್ವಂ**
**ನ್ಯೂನೋಪಮಾತ್ವಮುಪಮಾ ಸಮುಪೈತಿ ಸರ್ವಾ ।**
**ಸೂಕ್ಷ್ಮಸ್ವಭಾವಕಲನಾಪಿ ನಹಿ ಪ್ರತರ್ಕ್ಯಾ**
**ತದ್ವರ್ಣಯಾಮಿ ಭವತಃ ಕಥಮಾಭಿರೂಪ್ಯಮ್ ॥ ೧೪ ॥**

**ಅನುವಾದ** : ಯಾವ ಪರಮಾತ್ಮನ ವರ್ಣನೆಯನ್ನು ಮಾಡುವಾಗ ಅತಿಶಯೋಕ್ತಿ ಅಲಂಕಾರತ್ವವನ್ನೇ ಕಳೆದುಕೊಳ್ಳುವುದೋ, ಎಲ್ಲ ಉಪಮೆಯೂ ನ್ಯೂನೋಪಮೆಯೇ ಆಗಿಬಿಡುವುದೋ, ಯಾವನ ಸೂಕ್ಷ್ಮ ಸ್ವಭಾವವನ್ನು ಗ್ರಹಿಸುವುದೂ ಊಹಾತೀತವಾಗುವುದೋ, ಅಂಥ ನಿನ್ನ ಸೌಂದರ್ಯವನ್ನು ಹೇಗೆ ಬಣ್ಣಿಸಲಿ ?

**ವಿವರಣೆ** : ಯಾವುದಾದರೂ ವಸ್ತುವನ್ನು ವರ್ಣಿಸುವಾಗ ಅದರ ನಿಜ ಸ್ವರೂಪಕ್ಕಿಂತ ತುಂಬ ಹೆಚ್ಚಾಗಿ ಉತ್ಕರ್ಷವನ್ನು ವರ್ಣಿಸಿದರೆ ಅದು ಅತಿಶಯೋಕ್ತಿ ಎಂಬ ಅಲಂಕಾರ. ಭಗವಂತನ ವಿಷಯದಲ್ಲಿ ಎಷ್ಟು ಉತ್ಕರ್ಷವನ್ನು ಹೇಳಿದರೂ, ಅದು ವಸ್ತುಸ್ಥಿತಿಗಿಂತ ಕಡಿಮೆಯೇ ಆಗುವುದರಿಂದ ಅತಿಶಯೋಕ್ತಿ ಎಂಬ ಅಲಂಕಾರಕ್ಕೆ ಅಲ್ಲಿ ಅವಕಾಶವೇ ಇಲ್ಲ. ಹೋಲಿಕೆ ಮೂಲವಾದ ಉಪಮೆಯೂ ನ್ಯೂನೋಪಮೆ ಆಗಿ ಬಿಡುತ್ತದೆ. ನ್ಯೂನೋಪಮೆ ಒಂದು ದೋಷ. ಬೆಟ್ಟವನ್ನು ವರ್ಣಿಸಲು ಹೊರಟು ಅದು ಕುಂಬಳಕಾಯಿಯ ಹಾಗೆ ದೊಡ್ಡದು ಎಂದಾಗ ನ್ಯೂನೋಪಮೆ. ಇದನ್ನೇ ಹೀನೋಪಮೆ ಎಂದೂ ಕರೆಯುತ್ತಾರೆ. ವಾಸ್ತವವಾದ ಸೂಕ್ಷ್ಮಸ್ವಭಾವವನ್ನು ವರ್ಣಿಸುವ ಸ್ವಭಾವೋಕ್ತಿ ಎಂಬ

ಅಲಂಕಾರವನ್ನು ಆಶ್ರಯಿಸಿ ಭಗವಂತನನ್ನು ವರ್ಣಿಸೋಣವೆಂದರೆ, ಅವನ ಸ್ವಭಾವ ನಮ್ಮ ಊಹೆಗೂ ನಿಲುಕದಷ್ಟು ಸೂಕ್ಷ್ಮತಮ. ಹೀಗಿರುವಾಗ ವರದರಾಜಸ್ವಾಮಿಯನ್ನು ವರ್ಣಿಸುವುದಾದರೂ ಹೇಗೆ ಎಂದು ಕವಿ ಇಲ್ಲಿ ಪ್ರಶ್ನಿಸುತ್ತಾನೆ. ಭಗವಂತನ ಮಹಿಮೆ ವರ್ಣನೆಗೂ ನಿಲುಕದಷ್ಟು ದೊಡ್ಡದು ಎಂದು ತಾತ್ಪರ್ಯ.

**ಲಕ್ಷ್ಮ್ಯಾಃ ಪ್ರಿಯೋಽಸಿ ರತಿಕೇಲಿಕೃತಃ ಪಿತಾಸಿ**
**ವಿಶ್ವೈಕಮೋಹನರಸಸ್ಯ ಚ ದೇವತಾಸಿ ।**
**ಆವಾಸಭೂಮಿರಸಿ ಸರ್ವಗುಣೋತ್ತಮಾನಾಂ**
**ವೈಕುಂಠ ವರ್ಣಯತು ಕಸ್ತವ ರೂಪರೇಖಾಮ್ ॥ ೧೫ ॥**

**ಅನುವಾದ :** ವೈಕುಂಠನೆಂಬ ಹೆಸರಿನಿಂದ ಖ್ಯಾತನಾದ ವರದರಾಜ ! ನೀನು ಲಕ್ಷ್ಮಿಯ ಪ್ರಿಯ. ಮನ್ಮಥನ ತಂದೆ. ಜಗತ್ತನ್ನೆಲ್ಲಾ ಮೋಹಗೊಳಿಸುವ ಶೃಂಗಾರವೆಂಬ ರಸದ ದೇವತೆ. ಎಲ್ಲ ಉತ್ತಮ ಗುಣಗಳಿಗೂ ವಾಸಭೂಮಿ. ಹೀಗಿರುವ ನಿನ್ನ ರೂಪಸೌಂದರ್ಯವನ್ನು ಯಾರು ತಾನೆ ವರ್ಣಿಸಲು ಶಕ್ತರು ?

**ವಿವರಣೆ :** ಎಲ್ಲ ಸಂಪತ್ತುಗಳಿಗೆ ಅಧಿದೇವತೆಯಾದ ಲಕ್ಷ್ಮಿಯ ಪತಿ ವರದರಾಜ. ಜಗತ್ತಿಗೆಲ್ಲಾ ಆನಂದವನ್ನು ನೀಡುವ ರತಿಕೇಳಿಗೆ ಮೂಲ ಕಾರಣನಾದ ಮನ್ಮಥನ ತಂದೆಯೂ ಅವನೇ. ವಿಶ್ವಕ್ಕೆಲ್ಲಾ ಮೋಹಕತೆಯನ್ನು ನೀಡುವ ಏಕಮಾತ್ರ ರಸ ಎನಿಸಿದ ಶೃಂಗಾರರಸಕ್ಕೆ ದೇವತೆಯೂ ವಿಷ್ಣುರೂಪನಾದ ವರದರಾಜನೇ. ಶೃಂಗಾರ ಏವ ಪರಮಃ ಪರಃ ಪ್ರಹ್ಲಾದನೋ ರಸಃ ಎಂದು ಆನಂದವರ್ಧನಾದಿಗಳು ಸಿದ್ಧಾಂತಿಸಿದ್ದಾರೆ. ಅಲ್ಲದೆ ಸಕಲಕಲ್ಯಾಣಗುಣಗಳಿಗೆ ಆವಾಸಭೂಮಿಯೂ ವರದರಾಜನೇ. ಇಂಥ ಪರಮಾತ್ಮನ ರೂಪರೇಖೆಯನ್ನು (ಸೌಂದರ್ಯಾತಿಶಯವನ್ನು) ಯಾರು ವರ್ಣಿಸಲು ಸಾಧ್ಯ ? ಯಾರಿಗೂ ಪೂರ್ಣವಾಗಿ ಭಗವಂತನ ರೂಪವನ್ನು ವರ್ಣಿಸಲು ಸಾಮರ್ಥ್ಯವಿಲ್ಲ ಎಂದು ಇದರ ತಾತ್ಪರ್ಯ.

ಸರ್ವೋತ್ತರೋऽಸಿ ಸಕಲತ್ರಿದಶಾಶ್ರಯೋऽಸಿ
ಜ್ಯೋತಿಶ್ಛಟಾಘಟಿತಚಕ್ರಪರಿಷ್ಕೃತೋऽಸಿ।
ಶೃಂಗಾರಶೇವಧಿರಸಿ ದ್ವಿಪಶೈಲಮೌಲೇ
ಕಲ್ಯಾಣರೂಪ ಇತಿ ಕಸ್ತ್ವಯಿ ಚಿತ್ರವಾದಃ ॥ ೧೬ ॥

**ಅನುವಾದ :** ಹಸ್ತಿಶೈಲಕ್ಕೆ ಕಿರೀಟದಂತಿರುವ ವರದರಾಜನೆ, ನೀನು ಸರ್ವೋತ್ತರನು, ಎಲ್ಲ ದೇವತೆಗಳಿಗೆ ಆಶ್ರಯನು, ಜ್ಯೋತಿಸ್ಸಿನ ಕಾಂತಿಯಿಂದ ತುಂಬಿದ ಚಕ್ರದಿಂದ ಅಲಂಕೃತನು, ಅಲ್ಲದೆ ಶೃಂಗಾರರಸದ ನಿಧಿಯೂ ಆಗಿರುವೆ. ನೀನು ಕಲ್ಯಾಣರೂಪನೆಂಬುದರಲ್ಲಿ ಆಶ್ಚರ್ಯವೇನಿದೆ ?

**ವಿವರಣೆ :** ವರದರಾಜನಿಗೂ ಮೇರುಪರ್ವತಕ್ಕೂ ಇಲ್ಲಿ ಅಭೇದವನ್ನು ಶ್ಲೇಷಮೂಲಕವಾಗಿ ಕವಿ ಹೇಳಿದ್ದಾನೆ. ವರದರಾಜ ಸರ್ವೋತ್ತರ, ಎಂದರೆ ಎಲ್ಲರಿಗಿಂತ ಮೇಲಿನ ಸತ್ಯ, ಪರಾತ್ಪರ. ಮೇರುಪರ್ವತವೂ ಸರ್ವೋತ್ತರ, ಎಲ್ಲ ದೇಶಗಳಿಗೆ ಉತ್ತರದಲ್ಲಿರುವ ಪರ್ವತ. ಸಕಲ ದೇವತೆಗಳಿಗೆ ರಕ್ಷಕನಾದ ಕಾರಣದಿಂದ ವರದರಾಜ ಸಕಲತ್ರಿದಶಾಶ್ರಯನೆನಿಸುತ್ತಾನೆ. ಮೇರುಪರ್ವತ ಎಲ್ಲ ದೇವತೆಗಳ ನಿವಾಸಸ್ಥಾನವಾದ್ದರಿಂದ ಸಕಲತ್ರಿದಶಾಶ್ರಯ. ವರದ ರಾಜನು ಎಲ್ಲ ಜ್ಯೋತಿಸ್ಸುಗಳ ಕಾಂತಿಯಿಂದ ಕೂಡಿದ ಸುದರ್ಶನವೆಂಬ ಚಕ್ರವನ್ನು ಧರಿಸಿದ್ದಾನೆ. ಮೇರುಪರ್ವತದ ಸುತ್ತಲೂ ಸೂರ್ಯಚಂದ್ರಾದಿ ಜ್ಯೋತಿಶ್ಚಕ್ರವು ಸುತ್ತುತ್ತದೆ. ವರದರಾಜ ಶೃಂಗಾರ ರಸದ ನಿಧಿ. ಮೇರುಪರ್ವತ ಶೃಂಗದವರೆಗೆ ಹಬ್ಬಿರುವ ನಿಧಿಗಳನ್ನುಳ್ಳದ್ದು. ಇದರಿಂದ ವರದರಾಜನೂ ಮೇರುವಿನಂತೆ ಕಲ್ಯಾಣರೂಪನೆಂದು ಸಿದ್ಧವಾಗುತ್ತದೆ. ಸದಾ ಮಂಗಳರೂಪನೆಂದು ಒಂದು ಅರ್ಥ. ಕಲ್ಯಾಣ ಎಂದರೆ ಅಕ್ಷಯವಾದ ಸುವರ್ಣ ಎಂಬ ಅರ್ಥವೂ ಇದೆ. ಮೇರುಪರ್ವತ ಎಂದರೆ ಚಿನ್ನದ ಬೆಟ್ಟ. ಅದರಂತೆ ವರದರಾಜನೂ ಅಕ್ಷಯಸುವರ್ಣವನ್ನು ಭಕ್ತರಿಗೆ ಕರುಣಿಸುವನೆಂದು ಇಲ್ಲಿ ಧ್ವನಿತವಾಗುತ್ತದೆ.

**ಅಂಗಾನಿ ತೇ ನಿಖಿಲಲೋಕ ವಿಲೋಚನಾನಾಂ**
**ಸಂಭಾವನೀಯಗುಣ ಸಂಸರಣಾನಿ ಸತ್ಯಮ್ ।**
**ಯೇಷ್ವೇಕಮಾಪ್ಯ ನ ಪುರಾಧಿಗತಂ ಸ್ಮರಂತಿ**
**ವಾಂಛಂತಿ ನಾನ್ಯದಪಿ ಲಬ್ಧುಮದೋ ವಿಹಾಯ ॥ ೧೭ ॥**

**ಅನುವಾದ** : ಪೂಜನೀಯ ಗುಣಗಳನ್ನುಳ್ಳ ವರದರಾಜನೆ, ನಿನ್ನ ಅವಯವಗಳು ಸಕಲ ಜನರ ಕಣ್ಣುಗಳಿಗೆ ಸತ್ಯವಾಗಿ ಸಂಸರಣಗಳು (=ಮಹಾಮಾರ್ಗಗಳು ಅಥವಾ ಸಂಸಾರದಲ್ಲಿ ಉಂಟಾಗುವ ನಾನಾ ಜನ್ಮಗಳು). ಅವುಗಳಲ್ಲಿ ಒಂದನ್ನು ತಲುಪಿದಾಗ ಕಣ್ಣುಗಳು ಹಿಂದಿನದನ್ನು ನೆನಪಿಸಿಕೊಳ್ಳಲಾರವು. ಒಂದನ್ನು ಬಿಟ್ಟು ಮತ್ತೊಂದನ್ನು ಪಡೆಯಲು ಅವು ಆಶಿಸುವುದೂ ಇಲ್ಲ.

**ವಿವರಣೆ** : ವರದರಾಜನ ದಿವ್ಯಮಂಗಳ ವಿಗ್ರಹವನ್ನು ನೋಡುವಾಗ ಕಣ್ಣುಗಳು ಅವನ ಒಂದೊಂದು ಅಂಗದ ಸೊಬಗನ್ನು ನೋಡಿ ಅಲ್ಲಿಯೇ ನಿಂತುಬಿಡುತ್ತವೆ. ಮೊದಲು ನೋಡಿದ ಅಂಗದ ನೆನಪೂ ಅವಕ್ಕೆ ಉಳಿಯುವುದಿಲ್ಲ. ಬೇರೆಯದನ್ನು ನೋಡಬೇಕೆಂಬ ಬಯಕೆಯೂ ಅವಕ್ಕೆ ಹುಟ್ಟುವುದಿಲ್ಲ. ಇದರಿಂದ ವರದರಾಜನ ಅಂಗಗಳು ಜನರ ಕಣ್ಣುಗಳಿಗೆ ಸಂಸರಣಗಳು ಎಂದು ಹೇಳಲಾಗಿದೆ. ಸಂಸರಣ ಎಂದರೆ ಘಂಟಾಪಥ, ರಾಜಮಾರ್ಗ, ಎಲ್ಲ ಜನರ ಕಣ್ಣುಗಳು ಆನಂದದಿಂದ ಸಂಚರಿಸುವ ಮಹಾಮಾರ್ಗ. ಅದರ ಇನ್ನೊಂದು ಅರ್ಥ ಸಂಸಾರ. ಸಂಸಾರವೆಂದರೆ ಜನನ-ಮರಣಗಳ ಕೊನೆಯಿಲ್ಲದ ಚಕ್ರ. ಅದರಲ್ಲೂ ಜೀವಿಯು ಒಂದು ಜನ್ಮವನ್ನು ಪಡೆದಾಗ ಹಿಂದಿನ ಜನ್ಮದ ಸ್ಮರಣೆ ಇರುವುದಿಲ್ಲ. ಈ ಜನ್ಮವನ್ನು ಕೊನೆಗಾಣಿಸಿ ಬೇರೆ ಜನ್ಮವನ್ನು ಪಡೆಯಬೇಕೆಂಬ ಆಸೆಯೂ ಬರುವುದಿಲ್ಲ. ಆದ್ದರಿಂದ ಇಲ್ಲಿ ವರದರಾಜನ ವಿಗ್ರಹದ ಅಂಗಗಳನ್ನು 'ಸಂಸರಣ' ಎಂದು ಅರ್ಥಗರ್ಭಿತವಾಗಿ ಕರೆಯಲಾಗಿದೆ. ಒಂದೊಂದು ಅಂಗವೂ ಎಷ್ಟು ಸೌಂದರ್ಯಭರಿತವಾಗಿದೆಯೆಂದರೆ, ಅದನ್ನು ನೋಡುವುದರಲ್ಲಿಯೇ ಪರಮಾನಂದವು ಭಕ್ತರಿಗೆ ಸಿಗುತ್ತದೆ ಎಂದು ಇಲ್ಲಿ ಧ್ವನಿತವಾಗುತ್ತದೆ.

ಅಂಗಾನಿ ಸಂಸರಣಾನಿ ಎಂಬಲ್ಲಿ ರೂಪಕಾಲಂಕಾರ. ಇದಕ್ಕೆ ಪದ್ಯದ ಉತ್ತರಾರ್ಧದಲ್ಲಿ ಸಮರ್ಥನೆಯನ್ನು ಒದಗಿಸಿರುವುದರಿಂದ ಕಾವ್ಯಲಿಂಗವೆಂಬ

ಅಲಂಕಾರ. ಸಮರ್ಥನೀಯಸ್ವಾರ್ಥಸ್ಯ ಕಾವ್ಯಲಿಂಗಂ ಸಮರ್ಥನಮ್ ಎಂದು ಅದರ ಲಕ್ಷಣ.

**ಏಕತ್ರ ಮನ್ಮಥಮಜೀಜನದಿಂದಿರಾಯಾಂ**
**ಪೂರ್ವಂ ಭವಾನಿತಿ ಬುಧಾಃ ಕಿಮಪೂರ್ವಮಾಹುಃ ।**
**ಅದ್ಯಾಪಿ ತಂ ನ ಜನಯಸ್ಯರವಿಂದನಾಭ**
**ಕಾಸು ಪ್ರಸನ್ನಮಧುರಸ್ಮಿತಕಾಮಿನೀಷು ॥ ೧೮ ॥**

**ಅನುವಾದ :** ಎಲೈ ಪದ್ಮನಾಭಸ್ವಾಮಿ, ಹಿಂದೆ ನೀನು ಲಕ್ಷ್ಮಿಯಲ್ಲಿ ಮನ್ಮಥನನ್ನು ಉತ್ಪಾದಿಸಿದೆಯೆಂದು ಪಂಡಿತರು ಹೇಳುವುದರಲ್ಲಿ ಅಪೂರ್ವವಾದದ್ದು ಏನಿದೆ ? ಇಂದು ಕೂಡ ಪ್ರಸನ್ನವೂ ಮಧುರವೂ ಆದ ಮುಗುಳು ನಗೆಯನ್ನುಳ್ಳ ಯಾವ ಕಾಮಿನಿಯರಲ್ಲಿ ತಾನೆ ನೀನು ಮನ್ಮಥೋತ್ಪಾದನೆಯನ್ನು ಮಾಡುವುದಿಲ್ಲ ?

**ವಿವರಣೆ :** ಕಾಮದೇವನೆನಿಸಿದ ಮನ್ಮಥನು ವಿಷ್ಣುವಿಗೆ ಲಕ್ಷ್ಮಿಯಲ್ಲಿ ಜನಿಸಿದ ಮಗನೆಂದು ಪುರಾಣವಿದರಾದ ಪಂಡಿತರು ಹೇಳುವುದರಲ್ಲಿ ಆಶ್ಚರ್ಯವಿಲ್ಲ. ವರದರಾಜಸ್ವಾಮಿಯ ಸೌಂದರ್ಯ ಯಾವ ಸ್ತ್ರೀಯಲ್ಲಾದರೂ ಶೃಂಗಾರ ಭಾವನೆಯನ್ನು ಉತ್ಪಾದಿಸಲು ಸಮರ್ಥ ಎಂದು ಇದರ ತಾತ್ಪರ್ಯ.

ಮನ್ಮಥ ಎಂಬ ಶಬ್ದಕ್ಕೆ ಕಾಮದೇವ, ಶೃಂಗಾರಾಸಕ್ತಿ ಎಂಬ ಎರಡು ಅರ್ಥಗಳಿರುವುದನ್ನು (ಶ್ಲೇಷವನ್ನು) ಉಪಯೋಗಿಸಿ ಕವಿ ಇಲ್ಲಿ ಚಮತ್ಕಾರವನ್ನು ತಂದಿದ್ದಾನೆ.

**ನಿಕ್ಷಿಪ್ಯ ಹೃತ್ತ್ವಯಿ ಪುನರ್ಲಭತೇ ನ ಕೋಽಪಿ**
**ನಿರ್ಯಾತ ಇತ್ಯಧಿಪ ನ ತ್ವಯಿ ಚಿತ್ರಮೇತತ್ ।**
**ಹೃತ್ವಾ ಹಠಾನ್ಮೃಗದೃಶಾಂ ಹೃದಯಾನಿ ಯಸ್ತ್ವಮ್**
**ಏವಂ ನಿಲೀಯ ಕಿಲ ತಿಷ್ಠಸಿ ಶೈಲಶೃಂಗೇ ॥ ೧೯ ॥**

**ಅನುವಾದ :** ಲೋಕಾಧೀಶ್ವರನೇ, ನಿನ್ನಲ್ಲಿ ಹೃದಯವನ್ನು ಸಮರ್ಪಿಸಿ ಮುಕ್ತನಾದ ಯಾವನೂ ಆ ಹೃದಯವನ್ನು ಮತ್ತೆ ಪಡೆಯುವುದಿಲ್ಲ ಎಂಬುದು ಆಶ್ಚರ್ಯವೇನಲ್ಲ. ಏಕೆಂದರೆ ಸುಂದರಿಯರ ಹೃದಯಗಳನ್ನು

ಬಲಾತ್ಕಾರದಿಂದ ಆಕರ್ಷಿಸಿ ಅಪಹರಿಸಿದ ನೀನು ಹೀಗೆ ಇಲ್ಲಿ ಬೆಟ್ಟದ ಶಿಖರದಲ್ಲಿ ಬಚ್ಚಿಟ್ಟುಕೊಂಡಿರುವೆಯಲ್ಲವೆ ?

**ವಿವರಣೆ** : ಭಗವಂತನ ವಿಗ್ರಹವು ಎಷ್ಟು ಮನೋಹರವಾಗಿದೆಯೆಂದರೆ ಅದನ್ನು ನೋಡಿದ ಸುಂದರಿಯರು ಅವನಿಗೆ ತಮ್ಮ ಹೃದಯಗಳನ್ನೇ ಅರ್ಪಿಸಿಬಿಡುತ್ತಾರೆ. ಇದನ್ನು ಕವಿಯು ಹಾಸ್ಯದಿಂದ ನೋಡಿ ವರದರಾಜನು ಸುಂದರಿಯರ ಹೃದಯಗಳನ್ನು ಕದ್ದು, ಸಂಪತ್ತನ್ನು ಕದ್ದ ಕಳ್ಳನು ಬೆಟ್ಟಗಳಲ್ಲಿ ಅವಿತುಕೊಳ್ಳುವಂತೆ, ಈ ಹಸ್ತಿಗಿರಿಯ ಶಿಖರದ ಮೇಲೆ ನೆಲೆಸಿದ್ದಾನೆ ಎಂದು ಉತ್ಪ್ರೇಕ್ಷಿಸಿದ್ದಾನೆ. ಇದನ್ನು ಮೂಲವಾಗಿಟ್ಟುಕೊಂಡು ವೇದಾಂತದ ಪರಮಾರ್ಥವನ್ನೂ ಇಲ್ಲಿ ಹೇಳಿದ್ದಾನೆ. ಭಗವಂತನಿಗೆ ಪೂರ್ಣವಾಗಿ ಹೃದಯವನ್ನು ಅರ್ಪಿಸಿದವರು ಮುಕ್ತರಾಗುವುದರಿಂದ ಅವರಿಗೆ ಪುನರ್ಜನ್ಮ ಇರುವುದಿಲ್ಲ. ಅವರಿಗೆ ಅವರ ಹೃದಯಗಳನ್ನು ಹಿಂದಕ್ಕೆ ಕೊಡುವ ಪ್ರಶ್ನೆಯೇ ಉದ್ಭವಿಸುವುದಿಲ್ಲ ಎಂದು ಈ ಪದ್ಯದ ಭಾವಾರ್ಥ.

**ಮೋಹಂ ಜಗತ್ತ್ರಯಭುವಾಮಪನೇತುಮೇತದ್**
**ಆದಾಯ ರೂಪಮಖಿಲೇಶ್ವರ ದೇಹಭಾಜಾಮ್ ।**
**ನಿಸ್ಸೀಮಕಾಂತಿರಸನೀರಧಿನಾಮುನೈವ**
**ಮೋಹಂ ವಿವರ್ಧಯಸಿ ಮುಗ್ಧವಿಲೋಚನಾನಾಮ್ ॥ ೨೦ ॥**

**ಅನುವಾದ** : ಮೂರುಲೋಕಗಳಲ್ಲಿರುವ ಮಾನವರ ಮೋಹವನ್ನು ಕಳೆಯಲು ಈ ರೂಪವನ್ನು ಧರಿಸಿ ಬಂದಿರುವ ಅಖಿಲೇಶ್ವರ ವರದರಾಜ, ಸೀಮಾತೀತವಾದ ಕಾಂತಿರಸದ ಸಾಗರವಾಗಿರುವ ಈ ನಿನ್ನ ರೂಪದಿಂದಲೇ ಮುಗ್ಧಸುಂದರಿಯರಿಗೆ ಮೋಹವನ್ನು ಹಿಡಿಸುತ್ತಿರುವೆಯಲ್ಲಾ !

**ವಿವರಣೆ** : ಪರಮಾತ್ಮನು ವರದರಾಜನಾಗಿ ಕಾಂಚಿಯಲ್ಲಿ ಅವತರಿಸಿದ ಉದ್ದೇಶ ಜನರಲ್ಲಿರುವ ಸಂಸಾರದ ಮೋಹವನ್ನು ನಿರ್ಮೂಲಮಾಡಿ ಅವರಿಗೆ ಮುಕ್ತಿಯನ್ನು ಕೊಡುವುದು. ಆದರೆ ಅವನ ದಿವ್ಯವಿಗ್ರಹ ಎಷ್ಟು ಸುಂದರವಾಗಿದೆ ಎಂದರೆ ಅದನ್ನು ನೋಡಿದ ಸ್ತ್ರೀಯರಿಗೆ ಮೋಹ ಇನ್ನೂ ಹೆಚ್ಚುತ್ತದೆ ಎಂದು ವಾಚ್ಯಾರ್ಥ. ಭಗವಂತನಲ್ಲಿ ಹುಟ್ಟದ ಮೋಹವೂ ಭಕ್ತಿಯಾಗಿ ಮೋಕ್ಷವನ್ನು ನೀಡುತ್ತದೆ ಎಂಬುದು ಇಲ್ಲಿನ ಸೂಚ್ಯಾರ್ಥ. ಇದು ಅಸಂಗತಿಯೆಂಬ ಅಲಂಕಾರಕ್ಕೆ ಉದಾಹರಣೆಯಾಗುವುದೆಂದು

ಕುವಲಯಾನಂದದಲ್ಲಿ ಹೇಳಿದೆ. ಅನ್ಯತ್ ಕರ್ತುಂ ಪ್ರವೃತ್ತಸ್ಯ ತದ್ವಿರುದ್ಧಕೃತಿಃ ಎಂದು ಆ ಅಲಂಕಾರದ ಲಕ್ಷಣ. ಮೋಹವನ್ನು ತೊಲಗಿಸಲು ಅವತರಿಸಿದ ವರದರಾಜನು ಅದಕ್ಕೆ ವಿರುದ್ಧವಾಗಿ ಮೋಹವನ್ನು ಹೆಚ್ಚು ಮಾಡುತ್ತಿರುವನೆಂದು ಇಲ್ಲಿ ವರ್ಣಿಸಿರುವುದರಿಂದ ಅಸಂಗತ್ಯಲಂಕಾರ.

**ಉಚ್ಛೇದಮೇಕವಿಷಯಾತ್ ಕಥಯಂತಿ ಬೋಧಾ-**
**ನ್ಮೋಹಸ್ಯ ಯೇ ಖಲು ಕಥಂ ನ ಮೃಷಾವದಾಸ್ತೇ ।**
**ಲಾವಣ್ಯಮೀಶ ತವ ಯನ್ನಯನೈರ್ನಿಪೀಯ**
**ತತ್ರೈವ ಮೋಹಮಧಿಕಂ ದಧತೇ ತರುಣ್ಯಃ ॥ ೨೦ ॥**

**ಅನುವಾದ** : ಒಂದು ವಿಷಯದ ಸರಿಯಾದ ಜ್ಞಾನದಿಂದ ಅದರ ಬಗೆಗೆ ಇರುವ ಮೋಹ (ಅಜ್ಞಾನ) ನಾಶಗೊಳ್ಳುವುದೆಂದು ಹೇಳುವವರು ಮಿಥ್ಯಾವಾದಿಗಳಲ್ಲದೆ ಇರುವುದು ಹೇಗೆ ? ಜಗನ್ನಾಥನೆ, ನಿನ್ನ ಲಾವಣ್ಯವನ್ನು ತಮ್ಮ ಕಣ್ಣುಗಳಿಂದ ಹೀರುವ ತರುಣಿಯರು ಅದರಲ್ಲೇ ಹೆಚ್ಚಿನ ಮೋಹವನ್ನು ತಳೆಯುತ್ತಾರೆ.

**ವಿವರಣೆ** : ಹಗ್ಗದಲ್ಲಿ ಹಾವಿನ ಜ್ಞಾನ ಹುಟ್ಟಿದರೆ ಅದು ಮೋಹ. ಆಮೇಲೆ ಇದು ಹಗ್ಗ ಎಂಬ ಬೋಧ ಉದಯಿಸಿದರೆ, ಅದು ಹಾವು ಎಂಬ ಮೋಹ ಅಳಿಯುತ್ತದೆ. ಹೀಗೆ ಹೇಳುವವರು 'ಮೃಷಾವದ'ರು ಎಂದರೆ ಜಗನ್ಮಿಥ್ಯಾ ಎಂದು ಸಿದ್ಧಾಂತಮಾಡುವ ಅದ್ವೈತಿಗಳು ಎಂದೂ ಸೂಚಿತವಾಗುತ್ತದೆ. ವರದರಾಜನ ಲಾವಣ್ಯವನ್ನು ಕಣ್ಣಾರೆ ನೋಡಿದ ತರುಣಿಯರಿಗೆ ಅಲ್ಲೇ ಮೋಹ ಉಂಟಾಗುವುದಿಲ್ಲವೇ ? ಸಾಕ್ಷಾತ್ಕಾರ ಇಲ್ಲಿ ಮೋಹಕ್ಕೆ ಕಾರಣ ಆಯಿತಲ್ಲಾ ಎಂದು ಕವಿ ಕೇಳುತ್ತಾನೆ. ಮೋಹ ಎಂದರೆ ಅಜ್ಞಾನ, ಅನುರಾಗ ಎಂಬ ಎರಡು ಅರ್ಥಗಳಿರುವುದು ಇಲ್ಲಿನ ಚಮತ್ಕಾರದ ಮೂಲ.

**ಶುಭ್ರಾಂಶುವಕ್ತ್ರ ಶುಭಗೋಚರಲಾಭತೋಷಾತ್**
**ಸಂಪ್ರಸ್ಥಿತೋ ಮೃಗದೃಶಾಂ ನಯನಾಂಬುಜೌಘಃ ।**
**ತ್ವದ್ ಭಾಸರಿಕ್ತಃಥ ನಿಪತ್ಯ ಬಿಭರ್ತಿ ಮೋಹಂ**
**ಪ್ರಾಯಃ ಫಲಂತಿ ವಿಫಲಂತಿ ಚ ದೈವಚಿಂತಾಃ ॥ ೨೨ ॥**

**ಅನುವಾದ** : ಎಲೈ ಚಂದ್ರಮುಖ ವರದರಾಜನೆ, ಸುಂದರಿಯರ

ನಯನಕಮಲಗಳ ವೃಂದವು ಶುಭಶಕುನ ಸಿಕ್ಕಿತೆಂಬ ಸಂತೋಷದಿಂದ ಹೊರಟು ನಿನ್ನ ಕಾಂತಿಯೆಂಬ ನದಿಯಲ್ಲಿ ಬಿದ್ದು ಸಿಕ್ಕಿಕೊಂಡು ಮೋಹಕ್ಕೆ ವಶವಾಗಿದೆ. ಭವಿಷ್ಯದ ಬಗೆಗಿನ ಚಿಂತೆಗಳು ಅನೇಕವೇಳೆ ಫಲಿಸುವುದೂ ಉಂಟು, ವಿಫಲವಾಗುವುದೂ ಉಂಟು.

**ವಿವರಣೆ** : ಸುಂದರಿಯರು ವರದರಾಜನ ಮುಖವನ್ನು ನೋಡುವಾಗ ಅವರ ದೃಷ್ಟಿ ಅಲ್ಲೇ ನಿಂತು ಅವರಿಗೆ ಆ ಸ್ವಾಮಿಯಲ್ಲಿ ಅನುರಾಗ ಹುಟ್ಟುತ್ತದೆ ಎಂದು ಇಲ್ಲಿ ಮುಖ್ಯವಾಗಿ ಪ್ರತಿಪಾದಿತವಾಗಿದೆ. ವರದರಾಜನ ಮುಖವೇ ಚಂದ್ರ. ಅದರ ಕಾಂತಿಯೇ ಬೆಳದಿಂಗಳಿನ ಹೊಳೆ. ನೋಡುವ ನಾರಿಯರ ಕಣ್ಣುಗಳೇ ಕಮಲಗಳು. ಶುಭಶಕುನದ ಧೈರ್ಯದಿಂದ ಹೊರಟ ಕಣ್ಣುಗಳು ಮಧ್ಯೆ ಪ್ರವಾಹದಲ್ಲಿ ಸಿಕ್ಕುಬಿದ್ದು ಅಶುಭವನ್ನನುಭವಿಸುವಂತಾಯಿತು ಎಂಬುದೂ ಸೂಚಿತವಾಗುತ್ತದೆ 'ಮೋಹ' ಶಬ್ದದ ಶ್ಲೇಷದಿಂದ. ಅದನ್ನು ಅರ್ಥಾಂತರ ನ್ಯಾಸದಿಂದ ಕವಿ ಮತ್ತೆ ದೃಢಪಡಿಸಿದ್ದಾನೆ. ದೈವಚಿಂತೆ ಅಂದರೆ ಭವಿಷ್ಯವನ್ನು ಹೇಳುವುದು. ಅದು ಕೆಲವುಬಾರಿ ಸಫಲವೂ ಹಲವುಬಾರಿ ವಿಫಲವೂ ಆಗುವುದು ಅನುಭವಸಿದ್ಧ. ಈ ಸಂದರ್ಭದಲ್ಲಿ ಶುಭಶಕುನ ವಿಫಲವಾಗಿದೆ. ಏಕೆಂದರೆ ಕಮಲಗಳಿಗೂ ಚಂದ್ರನಿಗೂ ಪ್ರಕೃತಿಸಿದ್ಧ ವೈರವಿದೆ ಎಂದಿಲ್ಲಿ ಕವಿ ಸೂಚ್ಯವಾಗಿ ತಿಳಿಸಿದ್ದಾನೆ. ಅರ್ಥಾಂತರನ್ಯಾಸಾಲಂಕಾರ.

**ಯತ್ಪ್ರಾಣಸಂಯಮಜುಷಾಂ ಯಮಿನಾಂ ಮನಾಂಸಿ**
**ಮೂರ್ತಿಂ ವಿಶಂತಿ ತವ ಮಾಧವ ಕುಂಭಕೇನ ।**
**ಪ್ರತ್ಯಂಗಮೂರ್ಧದತಿವೇಲಮಹಾಪ್ರವಾಹ-**
**ಲಾವಣ್ಯ ಸಿಂಧುತರಣಾಯ ತದಿತ್ಯವೈಮಿ ॥ ೨೨ ॥**

**ಅನುವಾದ** : ಪ್ರಾಣಾಯಾಮಪರಿಣತರಾದ ಯೋಗಿಗಳ ಮನಸ್ಸು ಕುಂಭಕದಿಂದ ನಿನ್ನ ಆಕಾರವನ್ನು ಪ್ರವೇಶಿಸುತ್ತದೆ. ಲಕ್ಷ್ಮೀಪತಿ ವರದರಾಜನೆ, ನಿನ್ನ ಪ್ರತಿಯೊಂದು ಅವಯವದಲ್ಲೂ ಹರಿಯುವ ಲಾವಣ್ಯದ ನದಿಯನ್ನು ದಾಟುವುದಕ್ಕಾಗಿ ಅವರು ಹಾಗೆ ಮಾಡುವರೆಂದು ಊಹಿಸುತ್ತೇನೆ.

**ವಿವರಣೆ :** ಯೋಗಸಾಧನೆಯಲ್ಲಿ ಪ್ರಾಣಾಯಾಮ ಮಾಡುವಾಗ ಪೂರಕ, ಕುಂಭಕ ರೇಚಕ ಎಂಬ ಮೂರು ಅವಸ್ಥೆಗಳಿವೆ. ಅದರಲ್ಲಿ ಕುಂಭಕವನ್ನು ಮಾಡುವಾಗ ಶ್ರೀವಿಷ್ಣುವನ್ನು ಧ್ಯಾನಿಸಬೇಕೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ಯೋಗಿಗಳು ತಮ್ಮ ಮನಸ್ಸನ್ನು ಕುಂಭಕಾವಸ್ಥೆಯಲ್ಲಿ ವರದರಾಜನಲ್ಲಿ ನಿಲ್ಲಿಸುತ್ತಾರೆ. ಇಲ್ಲಿ ಕುಂಭಕ ಎಂಬ ಮಾತಿಗೆ ಘಟ ಅಥವಾ ಮಡಿಕೆ ಎಂಬ ಅರ್ಥವೂ ಇರುವುದರಿಂದ ಕವಿ ಉತ್ಪ್ರೇಕ್ಷೆಗೆ ಅದನ್ನು ಬಳಸಿಕೊಂಡಿದ್ದಾನೆ. ವರದರಾಜನ ಶರೀರದ ಲಾವಣ್ಯಜಲದ ಸಿಂಧು (ನದಿ ಅಥವಾ ಸಮುದ್ರ) ವನ್ನು ದಾಟಲು ಹೊರಟ ಯೋಗಿಗಳ ಮನಸ್ಸು ಅಲ್ಲಿ ತೇಲುವುದಕ್ಕೆ ಅನುಕೂಲವಾಗುವಂತೆ ಕುಂಭಕ (ಘಟ)ವನ್ನು ಸಹಾಯವಾಗಿ ಪಡೆದಿದೆ ಎಂಬುದೇ ಇಲ್ಲಿ ಉತ್ಪ್ರೇಕ್ಷೆ.

*ನಾಭೀಚಕ್ರಸ್ಥಿತಂ ಧ್ಯಾಯೇತ್ ಪೂರಕೇಣ ಪಿತಾಮಹಮ್*
*ಹೃದಯಾಬ್ಜಗತಂ ಧ್ಯಾಯೇತ್ ಕುಂಭಕೇನ ಜನಾರ್ದನಮ್ ।*
*ಲಲಾಟಸ್ಥಂ ಶಿವಂ ಧ್ಯಾಯೇತ್ ರೇಚಕೇನ ಮಹೇಶ್ವರಮ್ ॥*

ಎಂಬ ಸ್ಮೃತಿಯು ಕುಂಭಕವೇ ವಿಷ್ಣುಧ್ಯಾನಕ್ಕೆ ಯೋಗ್ಯವೆಂದು ತಿಳಿಸಿದೆ.

ಲಾವಣ್ಯಸಾಗರಭುವಿ ಪ್ರಣಯಂ ವಿಶೇಷಾದ್
ದುಗ್ಧಾಂಬುರಾಶಿದುಹಿತುಸ್ತವ ತರ್ಕಯಾಮಿ ।
ಯತ್ತಾಂ ಬಿಭರ್ಷಿ ವಪುಷಾ ನಿಖಿಲೇನ ಲಕ್ಷ್ಮೀಮ್
ಅನ್ಯಾಂ ತು ಕೇವಲಮಧೋಕ್ಷಜ ವಕ್ಷಸೈವ ॥ ೨೪ ॥

**ಅನುವಾದ :** ಅಧೋಕ್ಷಜನೆಂಬ ಹೆಸರನ್ನು ಹೊಂದಿರುವ ವರದರಾಜನೆ, ಕ್ಷೀರಸಾಗರದ ಮಗಳಾದ ಲಕ್ಷ್ಮಿಯಲ್ಲಿರುವುದಕ್ಕಿಂತ ಲಾವಣ್ಯಸಾಗರದಲ್ಲಿ ಜನಿಸಿದ ಕಾಂತಿಯೆಂಬ ಲಕ್ಷ್ಮಿಯಲ್ಲೇ ನಿನಗೆ ಹೆಚ್ಚಿನ ಅನುರಾಗವಿದೆಯೆಂದು ನಾನು ಊಹಿಸುತ್ತೇನೆ. ಏಕೆಂದರೆ ಲಾವಣ್ಯಲಕ್ಷ್ಮಿಯನ್ನು ಇಡೀ ಶರೀರದಲ್ಲಿ ನೀನು ಧರಿಸಿರುವೆ. ಕ್ಷೀರಸಾಗರಕನ್ನೆಯನ್ನು ಕೇವಲ ಎದೆಯಲ್ಲಿ ಧರಿಸಿರುವೆ.

**ವಿವರಣೆ :** 'ಲಕ್ಷ್ಮೀ' ಎಂಬ ಶಬ್ದಕ್ಕೆ ಪಾಲ್ಗಡಲಿನ ಕುವರಿ ಎಂಬ

ಅರ್ಥ ಏರುವಂತೆ ಕಾಂತಿ ಎಂಬ ಅರ್ಥವೂ ಇದೆ. ವರದರಾಜನು ವಕ್ಷಃಸ್ಥಲದಲ್ಲಿ ಕ್ಷೀರಸಾಗರಕನ್ಯೆಯನ್ನು ಧರಿಸಿರುವುದು ಸುಪ್ರಸಿದ್ಧ. ಅವನು ಸಂಪೂರ್ಣ ದೇಹದಲ್ಲಿ ಲಾವಣ್ಯಲಕ್ಷ್ಮಿಯನ್ನು (ಸೌಂದರ್ಯಕಾಂತಿಯನ್ನು) ಧರಿಸಿರುವುದೂ ಸ್ಪಷ್ಟ. ಇದನ್ನು ಆಧಾರವಾಗಿಟ್ಟುಕೊಂಡು ಕವಿಯು ಭಗವಂತನಿಗೆ ಹೇಳುತ್ತಾನೆ – ನಿನಗೆ ಹಾಲಿನ ಕಡಲಿನ ಮಗಳಾದ ಲಕ್ಷ್ಮಿಯಲ್ಲಿರುವುದಕ್ಕಿಂತ ಲಾವಣ್ಯಸಾಗರದಲ್ಲಿ ಹುಟ್ಟಿದ ಲಕ್ಷ್ಮಿ (ಕಾಂತಿ) ಯಲ್ಲೇ ಹೆಚ್ಚಿನ ಪ್ರೀತಿ ಎಂದು ನನ್ನ ಊಹೆ. ಏಕೆಂದರೆ ಒಬ್ಬಳಿಗೆ ಎದೆಯಲ್ಲಿ ಮಾತ್ರ ಜಾಗ ಕೊಟ್ಟಿರುವೆ, ಇನ್ನೊಬ್ಬಳಿಗೆ ಸಮಸ್ತ ಶರೀರದಲ್ಲಿ ಸ್ಥಾನವನ್ನು ಕೊಟ್ಟಿರುವೆ ಎಂದು. ವರದರಾಜನ ಸಮಸ್ತ ಶರೀರದಲ್ಲಿ ಲಾವಣ್ಯದ ಕಾಂತಿ ತುಂಬಿದೆ ಎಂದು ಹೇಳುವುದೇ ಇದರ ತಾತ್ಪರ್ಯ.

ಸಾರಸ್ವತಂ ವದನಪದ್ಮಭುವಂ ಪ್ರವಾಹಂ
ತ್ರೈಸ್ರೋತಸಂ ಚ ತವ ಪಾದಭುವಂ ನಿರೀಕ್ಷ್ಯ ।
ಸರ್ವಪ್ರತೀಕನಿಕರಾತ್ ಪ್ರವಹಂತ್ಯಜಸ್ರಮ್
ಈರ್ಷ್ಯಾವತೀಶ ಯಮುನಾ ಕಿಮು ಕಾಯಕಾಂತಿಃ ॥ ೨೫ ॥

**ಅನುವಾದ** : ವರದರಾಜ, ನಿನ್ನ ಮುಖಪದ್ಮದಿಂದ ಉದಯಿಸುವ ಸರಸ್ವತೀಪ್ರವಾಹವನ್ನೂ, ನಿನ್ನ ಪಾದಗಳಿಂದ ಉದಯಿಸಿದ ಗಂಗೆಯನ್ನೂ ನೋಡಿ ಅಸಹನೆಯಿಂದ ನಿನ್ನ ಎಲ್ಲ ಅಂಗಗಳಿಂದಲೂ ಸತತವಾಗಿ ಹರಿಯುತ್ತಿರುವ ಯಮುನೆಯೇ ಈ ನಿನ್ನ ದೇಹಕಾಂತಿಯೇ ?

**ವಿವರಣೆ** : ಗಂಗಾ, ಯಮುನಾ, ಸರಸ್ವತೀ ಎಂಬ ಮೂರು ನದಿಗಳು ಪ್ರಯಾಗದಲ್ಲಿ ಸಂಗಮವನ್ನು ಹೊಂದುವುವೆಂಬುವುದು ಸುಪ್ರಸಿದ್ಧ. ಇವುಗಳಲ್ಲಿ ಗಂಗೆಯು ಭಗವಾನ್ ವಿಷ್ಣುವಿನ ಚರಣಗಳಲ್ಲಿ ಉದ್ಭವಿಸಿದಳೆಂದು ಪುರಾಣಗಳಲ್ಲಿ ಹೇಳಿದೆ. ಪರಮಾತ್ಮನ ಮುಖದಿಂದ ಹೊರಡುವ ಸರಸ್ವತಿ, ಎಂದರೆ ಮಾತೇ, ಸರಸ್ವತೀ ನದಿ. ಹೀಗೆ ಈ ಎರಡು ನದಿಗಳಿಗೆ ಮಾತ್ರ ಪರಮಾತ್ಮನ ದೇಹದಲ್ಲಿ ಅವಕಾಶ ದೊರಕಿತು. ನನಗೆ

ಅಂಥ ಅವಕಾಶ ದೊರಕಲಿಲ್ಲ ಎಂದು ಈರ್ಷ್ಯೆಪಟ್ಟು ಯಮುನಾನದಿಯು ಪರಮಾತ್ಮನ ಸಕಲ ಅಂಗಗಳಿಂದಲೂ ದೇಹಕಾಂತಿಯ ರೂಪದಲ್ಲಿ ಹೊರಕ್ಕೆ ಹರಿಯುತ್ತಿದೆಯೇ ಎಂದು ಕವಿ ಇಲ್ಲಿ ಉತ್ಪ್ರೇಕ್ಷಿಸಿದ್ದಾನೆ. ಯಮುನಾನದಿ ಕಪ್ಪಗೆ ಕಾಣುವುದೆಂದು ಕವಿ ಸಮಯವಿದೆ. ಭಗವಾನ್ ವರದರಾಜನೂ ನೀಲಮೇಘಶ್ಯಾಮನಾದ್ದರಿಂದ ಅವನ ದೇಹಕಾಂತಿ ಯಮುನಾಪ್ರವಾಹಕ್ಕೆ ಸಮಾನವಾಗಿ ಕಾಣಿಸುತ್ತದೆ ಎಂದು ಇಲ್ಲಿನ ಭಾವಾರ್ಥ.

**ಆಪೂರಿತತ್ರಿಭುವನೋದರಮಂಶುಜಾಲಂ**
**ಮನ್ಯೇ ಮಹೇಂದ್ರಮಣಿವೃಂದಮನೋಹರಂ ತೇ ।**
**ತ್ವದ್ರಾಗದೀಪಿತಹೃದಾಂ ತ್ವರಿತಂ ವಧೂನಾಂ**
**ಪ್ರಾಪ್ತೇ ಸರಿತ್ಸಹಚರಂ ಪ್ರಲಯೇಽಭಿವೃದ್ಧಮ್ ॥ ೨೬ ॥**

**ಅನುವಾದ** : ವರದರಾಜ, ಇಂದ್ರನೀಲಮಣಿಗಳ ರಾಶಿಯಂತೆ ಮನೋಹರವಾದ, ಮೂರು ಲೋಕಗಳನ್ನೂ ತುಂಬುವ ನಿನ್ನ ಕಾಂತಿಸಮೂಹವು ನಿನ್ನಲ್ಲಿ ಅನುರಾಗದಿಂದ ಉದ್ದೀಪಿತವಾದ ಹೃದಯವುಳ್ಳ ಸುಂದರಿಯರ ಮನಸ್ಸಿಗೆ 'ಪ್ರಳಯ'ವು ಸಮೀಪಿಸಿದಾಗ ಉಕ್ಕಿಬರುವ ಸಮುದ್ರ ಎಂದು ಭಾವಿಸುತ್ತೇನೆ.

**ವಿವರಣೆ** : ಪ್ರಳಯ ಎಂಬ ಶಬ್ದಕ್ಕೆ ಎರಡು ಅರ್ಥಗಳಿವೆ. ಜಗತ್ತಿನ ಪೂರ್ಣ ವಿನಾಶ ಎಂಬುದು ಪ್ರಸಿದ್ಧವಾದ ಒಂದು ಅರ್ಥ. ಇಂಥ ಪ್ರಳಯ ಆಗುವಾಗ ಸಮುದ್ರಗಳು ಉಕ್ಕಿ ಭೂಮಿಯನ್ನೆಲ್ಲಾ ಮುಳುಗಿಸಿಬಿಡುತ್ತವೆ ಎಂದು ಪುರಾಣಗಳಲ್ಲಿ ಹೇಳಿದೆ. ಪ್ರಳಯಶಬ್ದದ ಇನ್ನೊಂದು ಅರ್ಥ ನಾಟ್ಯಶಾಸ್ತ್ರದಲ್ಲಿ ಹೇಳಿರುವ ಒಂದು ಸಾತ್ತ್ವಿಕ ಭಾವ. ಪ್ರಳಯೋ ನಷ್ಟಚೇಷ್ಟತಾ ಎಂದು ಅದರ ಅರ್ಥ. ಪ್ರೀತಿಯ ಅತಿಶಯದಿಂದ ಸಕಲ ಕ್ರಿಯೆಗಳೂ ನಿಂತುಹೋಗುವುದಕ್ಕೆ ಪ್ರಳಯ ಎಂದು ಅಲ್ಲಿ ಹೇಳಲಾಗಿದೆ. ಭಕ್ತಿಯ ಪರಾಕಾಷ್ಠೆಯಲ್ಲಿ ಪರಮಾತ್ಮನ ಅನುರಾಗ ಅತ್ಯಂತ ಉದ್ದೀಪಿತವಾದಾಗ ಉಂಟಾಗುವ ಮನಸ್ಸಿನ ಅವಸ್ಥೆಯೇ

ಪ್ರಳಯವಾದ್ದರಿಂದ ಆಗ ಉಕ್ಕಿದ ಸಮುದ್ರವೇ ನಾವು ವರದರಾಜನ ಶರೀರದಲ್ಲಿ ಕಾಣುವ ಇಂದ್ರನೀಲಮಣಿಪುಂಜಸಮಾನವಾದ ಕಾಂತಿ ಎಂದು ಕವಿ ಇಲ್ಲಿ ಉತ್ಪ್ರೇಕ್ಷಿಸಿದ್ದಾನೆ.

**ಯುಕ್ತ್ಯಾಗಮೇನ ಚ ಭವಾನ್ ಶಶಿವರ್ಣ ಏವ**
**ನಿಷ್ಕೃಷ್ಟಸತ್ತ್ವಗುಣಮಾತ್ರವಿವರ್ತಮೂರ್ತಿಃ ।**
**ಧತ್ತೇ ಕೃಪಾಂಬುಭರತಸ್ತ್ವಿಷಮೈಂದ್ರನೀಲೀಂ**
**ಶುಭ್ರೋಽಪಿ ಸಾಂಬುರಸಿತಃ ಖಲು ದೃಶ್ಯತೇಽಬ್ದಃ ॥ ೨೭ ॥**

**ಅನುವಾದ :** ವರದರಾಜ, ನೀನು ಪರಿಶುದ್ಧ ಸತ್ತ್ವಗುಣದಿಂದಲೇ ನಿಷ್ಪನ್ನವಾದ ಶರೀರವುಳ್ಳವನು. ಆದ್ದರಿಂದ ಯುಕ್ತಿಗೆ ಅನುಗುಣವಾಗಿಯೂ, ಪುರಾಣವಚನಗಳಿಗೆ ಅನುಗುಣವಾಗಿಯೂ ನೀನು ಚಂದ್ರನಂತೆ ಬಿಳುಪಾದ ಬಣ್ಣವನ್ನುಳ್ಳವನೇ ಆಗಿರುವೆ. ಆದರೂ ನಿನ್ನಲ್ಲಿ ಕರುಣೆ ಎಂಬ ನೀರು ತುಂಬಿರುವ ಕಾರಣದಿಂದ ಇಂದ್ರನೀಲಮಣಿಕಾಂತಿಯಂತಹ ಹೊಳಪನ್ನುಳ್ಳ ದೇಹವನ್ನು ಪಡೆದಿರುವೆ. ಮೋಡವು ಸ್ವತಃ ಶುಭ್ರವಾದರೂ ನೀರಿನಿಂದ ತುಂಬಿದಾಗ ಕಪ್ಪಾಗಿ ಕಾಣುವುದಿಲ್ಲವೆ ?

**ವಿವರಣೆ :** ಭಗವಾನ್ ವಿಷ್ಣು ಪೂರ್ಣಸತ್ತ್ವಗುಣಮಯನು. ಆದ್ದರಿಂದ ಅವನು ಬಿಳುಪಾಗಿರುವುದು ಯುಕ್ತಿಯುಕ್ತ. ಹಾಗೆಯೇ ಕೆಲವು ಪುರಾಣ ವಚನಗಳೂ ಇವೆ. ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ಎಂಬ ಶ್ಲೋಕವನ್ನಿಲ್ಲಿ ಸ್ಮರಿಸಬಹುದು. ಆದರೆ ವಿಷ್ಣು ನೀಲಮೇಘಶ್ಯಾಮ ಎಂದು ಪ್ರಸಿದ್ಧವಾಗಿರುವುದು ಹೇಗೆ ? ಅವನಲ್ಲಿ ಕಾರುಣ್ಯವೆಂಬ ನೀರು ತುಂಬಿರುವುದರಿಂದ ಅವನು ಹಾಗೆ ಕಾಣುತ್ತಾನೆಂದು ಇಲ್ಲಿ ಕವಿ ಹೇಳಿದ್ದಾನೆ. ಮೋಡವು ಸ್ವಯಂ ಬಿಳಿಯ ಬಣ್ಣದ್ದಾದರೂ ಅದರಲ್ಲಿ ನೀರು ತುಂಬಿರುವಾಗ ಅದು ಕಪ್ಪಾಗಿ ಕಾಣುತ್ತದೆ ಎಂದು ಇದಕ್ಕೆ ಸಮರ್ಥಕವಾಗಿ ಒಂದು ದೃಷ್ಟಾಂತವನ್ನು ಕೊನೆಯ ಸಾಲಿನಲ್ಲಿ ಕೊಟ್ಟಿದ್ದಾನೆ. ದೃಷ್ಟಾಂತಾಲಂಕಾರ.

ಸರ್ವಾತಿಶಾಯಿಸಹಜದ್ಯುತಿಭೂಷಿತಸ್ಯ
ವಿಶ್ವೈಕನಾಯಕ ವಿಭೂಷಣಧಾರಣಂ ತೇ ।
ಆಬದ್ಧಸೌಹೃದಮಪಾರಸುಖಾಂಬುರಾಶೇ–
ರ್ವೀಕ್ಷೇ ತವೈವ ವಿಷಯಾದಿಕುತೂಹಲೇನ ॥ ೨೮ ॥

**ಅನುವಾದ :** ಜಗತ್ತಿನ ಮುಖ್ಯ ನಾಯಕ ವರದರಾಜನೆ, ಎಲ್ಲವನ್ನೂ ಮೀರಿಸುವ ಸ್ವಾಭಾವಿಕ ಕಾಂತಿಯಿಂದ ಕಂಗೊಳಿಸುವ ನೀನು ಆಭರಣಗಳನ್ನು ಧರಿಸಿರುವುದು ಸ್ವಯಂ ಪರಮಾನಂದರಾಶಿಯಾದ ನಿನಗೆ ಉಂಟಾದ ವಿಷಯಕುತೂಹಲಕ್ಕೆ ಸಮಾನವೆಂದು ತಿಳಿಯುತ್ತೇನೆ.

**ವಿವರಣೆ :** ಭಗವಂತನಿಗೆ ಸಹಜವಾಗಿಯೇ ಅತಿಶಯಕಾಂತಿ ಇರುವುದರಿಂದ ಅವನು ಯಾವ ಒಡವೆಗಳನ್ನು ತೊಡಬೇಕಾಗಿಲ್ಲ. ಆದರೂ ದಿವ್ಯಾಭರಣಗಳನ್ನು ಧರಿಸಿದ್ದಾನೆ. ಅವನು ಸ್ವಯಂ ನಿರತಿಶಯಾನಂದದ ಸಮುದ್ರ. ಆದರೂ ಗೋಪಿಕಾವೃಂದದೊಡನೆ ನಾನಾ ವಿಧವಾದ ಆಟಗಳನ್ನಾಡಿ ಆನಂದಪಟ್ಟದ್ದು ಹೇಗೋ, ಒಡವೆಗಳನ್ನು ಧರಿಸಿರುವುದೂ ಹಾಗೇ ಕೇವಲ ಲೀಲಾರ್ಥವಾಗಿ ಎಂದು ಕವಿ ಇಲ್ಲಿ ವರ್ಣಿಸಿದ್ದಾನೆ.

ಮಧ್ಯೇ ಸ್ಫುರನ್ಮಕರತೋರಣಮಂಡಲಸ್ಯ
ಚಾಮೀಕರಾಭರಣಭೂಷಿತಸರ್ವಗಾತ್ರಃ ।
ಆದಿತ್ಯಬಿಂಬಗತಮಾಪ್ರಪದಾತ್ ಸುವರ್ಣಂ
ಭಾಸಾ ಭವಾನನುಕರೋತಿ ಭವಂತಮೇವ ॥ ೨೯ ॥

**ಅನುವಾದ :** ಮಕರತೋರಣಮಂಡಲದ ಮಧ್ಯದಲ್ಲಿ ಬಂಗಾರದ ಒಡವೆಗಳಿಂದ ಅಲಂಕೃತವಾದ ಎಲ್ಲ ಅಂಗಗಳನ್ನುಳ್ಳ ನೀನು ಸೂರ್ಯಬಿಂಬದ ಮಧ್ಯದಲ್ಲಿ ಕಾಂತಿಮಯನಾಗಿ ಪಾದದಿಂದ ತಲೆಯವರೆಗೆ ಪೂರ್ಣವಾಗಿ ಸುವರ್ಣರೂಪನಾದ ನಿನ್ನನ್ನೇ ಅನುಕರಿಸುತ್ತಿರುವೆ.

**ವಿವರಣೆ :** ದೇವಾಲಯದಲ್ಲಿ ಭಗವತ್‌ಪ್ರತಿಮೆಯ ಸುತ್ತಲೂ ರಚಿಸಿರುವ

ಅಲಂಕಾರ ವಿಶೇಷಕ್ಕೆ ಮಕರತೋರಣವೆಂದು ಹೆಸರು. ಅದರ ಮಧ್ಯೆ ಶ್ರೀ ವರದರಾಜನು ಸುವರ್ಣಾಭರಣಗಳಿಂದ ಭೂಷಿತನಾಗಿ ಹೊಳೆಯುತ್ತಾ ಕಂಗೊಳಿಸುತ್ತಾನೆ. ಸೂರ್ಯಬಿಂಬದ ಮಧ್ಯದಲ್ಲಿ ಪೂರ್ಣವಾಗಿ ಸುವರ್ಣಾಕಾರದಲ್ಲಿ ಶೋಭಿಸುವ ಪುರುಷನೇ ವಿಷ್ಣುವೆಂದು ಶ್ರುತಿಗಳು ಹೇಳುತ್ತವೆ. ''ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶಃ ಆ ಪ್ರಣಖಾತ್ ಸರ್ವ ಏವ ಸುವರ್ಣಃ'' ಇತ್ಯಾದಿ ಉಪನಿಷದ್‌ವಾಕ್ಯಗಳು ಇದರಲ್ಲಿ ಪ್ರಮಾಣ. ಈ ಕಾರಣದಿಂದ ದೇವಾಲಯದಲ್ಲಿ ಶೋಭಿಸುವ ವರದರಾಜನು ಸೂರ್ಯಬಿಂಬದಲ್ಲಿ ಹೊಳೆಯುವ ತನ್ನನ್ನೇ ಅನುಕರಿಸುತ್ತಿದ್ದಾನೆ ಎಂದಿಲ್ಲಿ ಕವಿ ಚಮತ್ಕಾರದಿಂದ ಹೇಳಿದ್ದಾನೆ. ಅನನ್ವಯವೆಂಬ ಅಲಂಕಾರ ಅಥವಾ ಅವಸ್ಥಾಭೇದದಿಂದ ಸಾದೃಶ್ಯವನ್ನು ಕಲ್ಪಿಸಿಕೊಂಡರೆ ಉಪಮಾಲಂಕಾರ.

**ಸೇವಾರಸಾಗತಸುರಾದ್ಯನುಬಿಂಬದೃಶ್ಯಂ**
**ಭೂಷಾಮಣಿಪ್ರಕರದರ್ಶಿತಸರ್ವವರ್ಣಮ್ ।**
**ತ್ವಾಂ ವಿಶ್ವರೂಪವಪುಷೇವ ಜನಂ ಸಮಸ್ತಂ**
**ಪಶ್ಯಾಮಿ ನಾಗಗಿರಿನಾಥ ಕೃತಾರ್ಥಯಂತಮ್ ॥ ೩೦ ॥**

**ಅನುವಾದ :** ಹಸ್ತಿಗಿರಿನಾಥ ವರದರಾಜ, ನಿನ್ನ ಸೇವೆಗಾಗಿ ಬಂದಿರುವ ಅನೇಕ ದೇವತೆಗಳು ನಿನ್ನ ವಿಗ್ರಹದಲ್ಲಿ ಪ್ರತಿಬಿಂಬಿತರಾಗಿ ಕಾಣುತ್ತಾರೆ. ನಿನ್ನ ಒಡವೆಗಳಲ್ಲಿರುವ ರತ್ನಗಳ ಸಮೂಹವು ಎಲ್ಲ ವರ್ಣಗಳನ್ನೂ ತೋರಿಸುತ್ತದೆ. ವಿಶ್ವರೂಪವನ್ನು ಧರಿಸಿ ಸಮಸ್ತ ಜನರನ್ನೂ ಕೃತಾರ್ಥಗೊಳಿಸುತ್ತಿರುವಂತೆ ತೋರುವ ನಿನ್ನನ್ನು ನಾನು ನೋಡುತ್ತಿದ್ದೇನೆ.

**ವಿವರಣೆ :** ಭಗವದ್ಗೀತೆಯಲ್ಲಿ ವಿಶ್ವರೂಪದರ್ಶನ ಸಂದರ್ಭದಲ್ಲಿ ''ಪಶ್ಯಾಮಿ ದೇವಾಂಸ್ತವ ದೇವ ದೇಹೇ'' ''ನಾನಾವರ್ಣಾಕೃತೀನಿ ಚ'' ಮುಂತಾದ ವರ್ಣನೆಗಳಿವೆ. ಭಗವಂತನ ಶರೀರದಲ್ಲಿ ಎಲ್ಲ ದೇವತೆಗಳನ್ನೂ, ಎಲ್ಲ ಬಣ್ಣಗಳನ್ನೂ ಅರ್ಜುನ ಕಂಡನಂತೆ. ಈಗ ವರದರಾಜನ ಶರೀರದಲ್ಲಿ ಸೇವಾಗತರಾದ ದೇವತೆಗಳು ಪ್ರತಿಬಿಂಬರೂಪದಿಂದ ಕಾಣುತ್ತಾರೆ.

ಆಭರಣಗಳ ರತ್ನಗಳು ಅನೇಕ ಬಣ್ಣಗಳಿಂದ ತುಂಬಿವೆ. ಆದ್ದರಿಂದ ಸಮಸ್ತ ಜನರನ್ನೂ ಕೃತಾರ್ಥರನ್ನಾಗಿ ಮಾಡಲು ವಿಶ್ವರೂಪವನ್ನು ತೋರಿಸುತ್ತಿರುವ ಪರಮಾತ್ಮನೇ ವರದರಾಜ ಎಂದು ಕವಿಯು ಇಲ್ಲಿ ಭಾವಿಸುತ್ತಾನೆ.

**ಶೃಂಗೀಸುವರ್ಣರುಚಿಪಿಂಜರಿತೈಕಭಾಗಾ-**
**ನ್ಯಂಗೇಷು ದೇವ! ತವ ಭೂಷಣಮೌಕ್ತಿಕಾನಿ।**
**ಪ್ರತ್ಯಕ್ಷಯಂತಿ ಭವತಃ ಪ್ರತಿರೋಮಕೂಪ-**
**ವಿಶ್ರಾಂತಸಾಂದ್ರಜಗದಂಡಸಹಸ್ರಶೋಭಾಮ್ ॥ ೩೦ ॥**

**ಅನುವಾದ** : ವರದರಾಜ, ನಿನ್ನ ಒಡವೆಗಳಲ್ಲಿರುವ ಮುತ್ತುಗಳು ಅಲಂಕಾರಕ್ಕಾಗಿ ಉಪಯೋಗಿಸಿರುವ ಪರಿಶುದ್ಧ ಚಿನ್ನದ ಪ್ರತಿಫಲನದಿಂದ ಭಾಗಶಃ ಪಿಂಜರ (ಕೆಂಪು ಮಿಶ್ರಿತ ಹಳದಿ) ವರ್ಣದಿಂದ ಕೂಡಿಕೊಂಡು ನಿನ್ನ ಒಂದೊಂದು ರೋಮಕೂಪದಲ್ಲಿ ಅಡಗಿರುವ ಸಾವಿರಾರು ಬ್ರಹ್ಮಾಂಡಗಳ ವೈಭವವನ್ನು ಪ್ರತ್ಯಕ್ಷ ಮಾಡಿಕೊಡುತ್ತಿವೆ.

**ವಿವರಣೆ** : ಪರಮಾತ್ಮನ ಒಂದೊಂದು ರೋಮಕೂಪದಲ್ಲೂ ಬ್ರಹ್ಮಾಂಡಗಳು ಅಡಗಿರುತ್ತವೆ. ಆದ್ದರಿಂದಲೇ ಅವನನ್ನು ಅಖಿಲಾಂಡ ಬ್ರಹ್ಮಾಂಡಕೋಟಿನಾಯಕ ಎಂದು ಕರೆಯುತ್ತಾರೆ. ಈಗ ವರದರಾಜನ ದಿವ್ಯಮಂಗಳವಿಗ್ರಹದ ಆಭರಣಗಳಲ್ಲಿ ಹೊಳೆಯುವ ಮುತ್ತುಗಳು ಭಾಗಶಃ ಬಿಳುಪಾಗಿಯೂ, ಭಾಗಶಃ ಹಳದಿ ಮಿಶ್ರಿತ ಕೆಂಪುಬಣ್ಣವುಳ್ಳವಾಗಿಯೂ ಇವೆ. ಏಕೆಂದರೆ ಬೆಳ್ಳಗಿರುವ ಮುತ್ತುಗಳಲ್ಲಿ ಅಲಂಕಾರಸುವರ್ಣ ಪ್ರತಿಫಲಿಸುತ್ತದೆ. ತೇ ಆಂಡಕಾಪಾಲೇ ರಜತಂ ಚ ಸುವರ್ಣಂ ಚಾಭವತಾಮ್ । ತದ್ಯದ್‌ರಜತಂ ಸೇಯಂ ಪೃಥಿವೀ ಯತ್‌ಸುವರ್ಣಂ ಸಾ ದ್ಯೌಃ ಇತ್ಯಾದಿ ಶ್ರುತಿಯನ್ನು ಅನುಸಂಧಾನಮಾಡಿಕೊಂಡು ಈ ಪದ್ಯವನ್ನು ಕವಿ ರಚಿಸಿದ್ದಾನೆ.

ಆಬದ್ಧಪಂಕ್ತಿಮಹಿತಾನಿ ತವ ತ್ರಿಧಾಮನ್
ವೀಧ್ರ್ಯಾಣಿ ಹೀರಶಕಲಾನಿ ವಿಭೂಷಣೇಷು ।
ಸಮ್ಮೋಹನಾನಿ ಸರಸೀರುಹಲೋಚನಾನಾಂ
ಮಂತ್ರಾಕ್ಷರಾಣಿ ಕಲಯೇ ಮಕರಧ್ವಜಸ್ಯ ॥ ೩೨ ॥

**ಅನುವಾದ** : ಸೃಷ್ಟಿಸ್ಥಿತಿಲಯಗಳಲ್ಲಿ ಬ್ರಹ್ಮ-ವಿಷ್ಣು-ಮಹೇಶ್ವರರೆಂಬ ಮೂರು ರೂಪಗಳನ್ನು ಧರಿಸುವ ಮೂಲೋಕದೊಡೆಯ ವರದರಾಜನೆ, ನಿನ್ನ ಒಡವೆಗಳಲ್ಲಿ ಪ್ರತಿಫಲಿಸುವ ಪರಿಶುದ್ಧವಜ್ರಖಂಡಗಳು ಕಮಲ ನಯನೆಯರಿಗೆಲ್ಲಾ ಸಮ್ಮೋಹಕವಾಗಿರುವ ಮನ್ಮಥಮಂತ್ರಾಕ್ಷರಗಳೆಂದು ತಿಳಿಯುತ್ತೇನೆ.

**ವಿವರಣೆ** : ಮನ್ಮಥಮಂತ್ರದ ಬೀಜಾಕ್ಷರಗಳು ಹೇಗೆ ತರುಣಿಯರಿಗೆ ಮೋಹಕವೋ ಹಾಗೆ ವರದರಾಜನ ಆಭರಣಗಳಲ್ಲಿ ಹೊಳೆಯುವ ವಜ್ರಖಂಡಗಳೂ ಮೋಹಕವಾಗಿವೆ ಎಂಬ ಭಾವನೆಯಿಂದ ಆ ವಜ್ರಖಂಡಗಳೇ ಬೀಜಾಕ್ಷರಗಳೆಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ಆಪಾದಮೌಲಿವಿಧೃತೇಷು ವಿಭಾಂತಿ ದೇವ
ಸ್ಥೂಲೇಂದ್ರನೀಲಮಣಯೋ ಮಣಿಭೂಷಣೇಷು ।
ರಾಗಾದುಪೇತ್ಯ ತವ ಸುಂದರ ತತ್ತದಂಗೇ
ಲಗ್ನಾನಿ ಲೋಕಸುದೃಶಾಮಿವ ಲೋಚನಾನಿ ॥ ೩೩ ॥

**ಅನುವಾದ** : ವರದರಾಜ, ನೀನು ಕಾಲಿನಿಂದ ತಲೆಯವರೆಗೆ ಎಲ್ಲ ಅಂಗಗಳಲ್ಲಿ ಧರಿಸಿರುವ ಆಭರಣಗಳಲ್ಲಿ ಪ್ರತಿಬಿಂಬಿತವಾದ ದಪ್ಪ ಇಂದ್ರನೀಲರತ್ನಗಳು ಪ್ರೀತಿಯಿಂದ ತಾವಾಗಿ ಬಂದು ಆ ಅಂಗಗಳಲ್ಲಿ ಅಂಟಿಕೊಂಡ ಸುಂದರೀನಯನಗಳಂತೆ ಕಂಗೊಳಿಸುತ್ತಿವೆ.

**ವಿವರಣೆ** : ಸುಂದರಿಯರ ಕಣ್ಣುಗಳು ಅಗಲವಾಗಿಯೂ ಕಪ್ಪಾಗಿಯೂ ಇರುವುದರಿಂದ ಇಲ್ಲಿ ಅವುಗಳನ್ನು ಇಂದ್ರನೀಲಮಣಿಗಳಿಗೆ ಹೋಲಿಸಿದೆ. ಪ್ರೀತಿಯಿಂದ ಬಂದು ಅಂಟಿಕೊಂಡಿರುವ ಕಣ್ಣುಗಳೇ ಈ ಇಂದ್ರನೀಲ ಮಣಿಗಳೆಂದು ಹೇಳಿರುವುದರಿಂದ ಇದು ಉತ್ಪ್ರೇಕ್ಷೆ.

**ತ್ವಾಂ ವೀಕ್ಷ್ಯ ಮುಕ್ತಿದ ಜನಾಸ್ತರಣಿಂ ಸಖಾಯಂ**
**ಭಿಂದ್ಯುಃ ಕಿಲೇತಿ ತವ ಭೂಷಣಪದ್ಮರಾಗಾಃ ।**
**ಶಂಕೇ ಚಿರಂ ಜನದೃಶಃ ಸ್ವಕರೈಃ ಕ್ಷಿಪಂತಿ**
**ತನ್ಮಾತ್ರತೋಽಪಿ ತವ ಮುಕ್ತಿದತಾಮಬುದ್ಧ್ವಾ ॥ ೩೪ ॥**

**ಅನುವಾದ :** ಎಲ್ಲ ಭಕ್ತರಿಗೆ ಮುಕ್ತಿಯನ್ನು ನೀಡುವ ವರದರಾಜ, ನಿನ್ನನ್ನು ಸಾಕ್ಷಾತ್ಕರಿಸಿಕೊಂಡವರು ತಮ್ಮ ಸ್ನೇಹಿತನಾದ ಸೂರ್ಯನನ್ನು ಭೇದಿಸಿ ಬಿಡುತ್ತಾರೆ ಎಂಬ ಶಂಕೆಯಿಂದಲೋ ಎಂಬಂತೆ ನಿನ್ನ ಆಭರಣಗಳಲ್ಲಿರುವ ಪದ್ಮರಾಗಗಳು ಜನರ ಕಣ್ಣುಗಳನ್ನು ಕೋರೈಸುವ ತಮ್ಮ ಕಿರಣಗಳಿಂದ ಹಿಂದಕ್ಕೆ ಅಟ್ಟುತ್ತವೆ. ನಿನ್ನ ಆಭರಣಕಾಂತಿಯನ್ನು ನೋಡಿದ ಮಾತ್ರಕ್ಕೆ ನೀನು ಮುಕ್ತಿಯನ್ನು ಕೊಡುವೆಯೆಂಬುದನ್ನು ಅರಿಯದೆ ಹಾಗೆ ಅವು ಮಾಡುವುವೆಂದು ಊಹಿಸುತ್ತೇನೆ.

**ವಿವರಣೆ :** ಮುಕ್ತಿಯನ್ನು ಪಡೆದವರು ಸೂರ್ಯಮಂಡಲವನ್ನು ಭೇದಿಸಿಕೊಂಡು ಮೇಲೆ ಹೋಗುವರೆಂದು ಶ್ರುತಿ ಹೇಳುತ್ತದೆ. ಪದ್ಮರಾಗ ಮಣಿಗಳು ಸೂರ್ಯನಂತೆ ಕೆಂಪಗೆ ಹೊಳೆಯುವುದರಿಂದ ಅವು ಸೂರ್ಯನ ಮಿತ್ರರೆಂದು ಕವಿಯ ಕಲ್ಪನೆ. ತಮ್ಮ ಮಿತ್ರನು ತೂತಾಗುವುದನ್ನು ತಪ್ಪಿಸಲೋ ಎಂಬಂತೆ ತಮ್ಮ ಕಾಂತಿಯಿಂದ, ನೋಡುವವರ ಕಣ್ಣುಗಳನ್ನು ಕೋರೈಸಿ ಮುಚ್ಚುವಂತೆ ಮಾಡುತ್ತಿವೆ ಎಂದು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ಆದರೇನಂತೆ, ಕ್ಷಣಕಾಲ ವರದರಾಜನ ಎದುರಿಗೆ ನಿಂತು ಅವನನ್ನು ನೋಡಲು ಕಣ್ಣು ತೆರೆದರೆ ಸಾಕು, ಅಷ್ಟರಿಂದಲೇ ಸಂತುಷ್ಟನಾದ ಭಗವಂತನು ಮುಕ್ತಿಯನ್ನು ನಿಶ್ಚಿತವಾಗಿ ನೀಡುತ್ತಾನೆಂದು ಆ ಪದ್ಮರಾಗಗಳಿಗೆ ತಿಳಿಯದು ಎಂದೂ ಕವಿ ಹೇಳಿದ್ದಾನೆ. ರಾಜನ ಬಳಿಗೆ ಹೋಗಲು ಅಪೇಕ್ಷಿಸುವವರು ಬಾಗಿಲ ಬಳಿ ಬಂದಾಗ ದ್ವಾರಪಾಲಕರು ತಡೆಯುತ್ತಾರೆ. ಆದರೆ ಸ್ವಾಮಿಯ ಕೃಪಾಪಾತ್ರರು ಅವರೆಂದು ತಿಳಿದಾಗ ಒಳಗೆ ಹೋಗಲು ಬಿಡುತ್ತಾರೆ. ಹಾಗೆ ಇಲ್ಲಿಯೂ ಭಗವಂತನ ದರ್ಶನ ಕ್ಷಣಕಾಲಾನಂತರ ಭಕ್ತರಿಗೆ ದೊರಕುವುದರಲ್ಲಿ ಸಂಶಯವಿಲ್ಲವೆಂದು ಸೂಚಿತವಾಗಿದೆ.

ಪಾದಾವುಪೇಂದ್ರ ಸುಕುಮಾರತಮಾವಿಮೌ ತೇ
ಭೂಷಾಭರಾದರುಣಿಮಾನಮಿವೋದ್ಗಿರಂತೌ ||
ಇತ್ಥಂ ಕಿಮಸ್ತಿ ಸುಕುಮಾರಮಿತೀವ ಬೋದ್ಧುಂ
ಲೋಕತ್ರಯೇऽಪಿ ಚ ಕರೈಃ ಸ್ಪೃಶತಃ ಪದಾರ್ಥಾನ್ || ೩೫ ||

**ಅನುವಾದ** : ಉಪೇಂದ್ರನೆಂಬ ನಾಮಧೇಯವನ್ನುಳ್ಳ ವರದರಾಜನೆ, ನಿನ್ನ ಪಾದಗಳು ಅತ್ಯಂತ ಮೃದುವಾಗಿವೆ. ಅವುಗಳಿಗೆ ಧರಿಸಿರುವ ಭೂಷಣಗಳ ಭಾರವನ್ನು ಸಹಿಸಲಾರದೆಯೋ ಎಂಬಂತೆ ಅವು ಕೆಂಪುಕಾಂತಿಯನ್ನು ಹೊರಸೂಸುತ್ತಿವೆ. ಮೂರು ಲೋಕಗಳಲ್ಲಿ ನಮ್ಮಷ್ಟು ಸುಕುಮಾರವಾದ ಪದಾರ್ಥ ಬೇರೆ ಯಾವುದಾದರೂ ಇದೆಯೇ ಎಂದು ಪರೀಕ್ಷಿಸಲೋ ಎಂಬಂತೆ ಅವು ತಮ್ಮ ಕಿರಣಗಳಿಂದ ಎಲ್ಲ ಪದಾರ್ಥಗಳನ್ನು ಮುಟ್ಟುತ್ತಿವೆ.

**ವಿವರಣೆ** : ವಿಷ್ಣು ಒಂದು ಅವತಾರದಲ್ಲಿ ಇಂದ್ರನ ತಮ್ಮನಾಗಿ ಕಾಣಿಸಿಕೊಂಡ ಕಾರಣದಿಂದ ಅವನಿಗೆ ಉಪೇಂದ್ರ ಎಂಬ ಹೆಸರು ಬಂತು. ಉಪೇಂದ್ರ ಇಂದ್ರಾವರಜಃ ಚಕ್ರಪಾಣಿಶ್ಚತುರ್ಭುಜಃ ಎಂದು ಅಮರಕೋಶ ಹೇಳುತ್ತದೆ. ಅವನ ಪಾದಗಳು ಮೃದುವಾಗಿ ಕೆಂಪುಬಣ್ಣದ ಕಾಂತಿಯಿಂದ ಕೂಡಿವೆ. ಇದನ್ನು ಆಧಾರವಾಗಿಟ್ಟುಕೊಂಡು ಕವಿಯು, ತಮ್ಮ ಕೆಂಪುಕಿರಣಗಳ ಲೋಕದ ಎಲ್ಲ ಪದಾರ್ಥಗಳನ್ನು ಮುಟ್ಟಿಮುಟ್ಟಿ ನೋಡಿ ಏನಾದರೂ ತಮಗಿಂತ ಮೃದುವಾಗಿರುವುದು ಇದೆಯೇ ಎಂದು ಆ ಪಾದಗಳು ಪರೀಕ್ಷಿಸುತ್ತಿರುವಂತೆ ತೋರುತ್ತದೆ ಎಂದು ಉತ್ಪ್ರೇಕ್ಷಿಸಿದ್ದಾನೆ. 'ಕರ' ಎಂಬ ಪದಕ್ಕೆ ಕಿರಣ ಮತ್ತು ಕೈ ಎಂಬ ಎರಡು ಅರ್ಥಗಳಿರುವುದರಿಂದ ಮೃದುವಾದ ವಸ್ತುಗಳನ್ನು ಕೈಗಳಿಂದ ಮುಟ್ಟಿ ಮುಟ್ಟಿ ನೋಡುವ ಸನ್ನಿವೇಶ ಇಲ್ಲಿ ಸೂಚ್ಯವಾಗಿದೆ. ಫಲೋತ್ಪ್ರೇಕ್ಷಾಲಂಕಾರ.

ಮೂರ್ತಿಂ ಪ್ರಸಾಧಯತಿ ತೇ ಚರಣಾಂಶುಪುಂಜ-
ಸ್ತಾಂ ಜೈಮಿನಿಃ ಕಥಮಧೀಶ ನಿರಾಕರೋತು |
ಸರ್ವತ್ರ ಯೋಗಮುಪಪಾದಯತಾರುಣಿಮ್ನ-
ಸ್ತೇನಾರುಣಾಧಿಕರಣೇ ಹಿ ಮುನಿಸ್ಸ ಭಗ್ನಃ || ೩೬ ||

**ಅನುವಾದ** : ಜಗದೀಶ್ವರನೆ, ನಿನ್ನ ಪಾದಗಳ ಕಾಂತಿಕಿರಣಸಮೂಹವು

ನಿನ್ನ ವಿಗ್ರಹವನ್ನು ಅಲಂಕರಿಸುತ್ತಿದೆ. ಅದನ್ನು ಜೈಮಿನಿಯು ಹೇಗೆ ತಾನೆ ನಿರಾಕರಿಸಲು ಸಾಧ್ಯ ? ಎಲ್ಲ ಕಡೆ ತನ್ನ ಅರುಣಿಮೆ (ಕೆಂಪು ಕಾಂತಿ)ಯನ್ನು ಹರಡುತ್ತಿರುವ ಆ ಚರಣಕಿರಣಸಮೂಹವು ಅರುಣಾಧಿಕರಣದಲ್ಲೂ ಆ ಜೈಮಿನಿಯ ವಾದವನ್ನು ಭಗ್ನಮಾಡಿದೆಯಲ್ಲವೆ ?

**ವಿವರಣೆ** : ಜೈಮಿನಿ ಮೀಮಾಂಸಾಸೂತ್ರಕಾರ. ಪೂರ್ವಮೀಮಾಂಸಾ ಶಾಸ್ತ್ರದ ಪ್ರಕಾರ ದೇವತೆಗಳಿಗೆ ವಿಗ್ರಹ ಅಥವಾ ಮೂರ್ತಿಯೇ ಇಲ್ಲ. ಆದರೆ ವರದರಾಜನ ಕಾಂತಿಪುಂಜರಂಜಿತವಾದ ಮೂರ್ತಿಯನ್ನು ಆ ಜೈಮಿನಿ ನಿರಾಕರಿಸಲು ಹೇಗೆ ಸಾಧ್ಯ ? ಚರಣಕಿರಣಸಮೂಹವು ಎಲ್ಲ ವಸ್ತುಗಳಿಗೂ ಕೆಂಪುಬಣ್ಣವನ್ನೆರಚುತ್ತಿದೆ. ಮೀಮಾಂಸಾಶಾಸ್ತ್ರದ ಅರುಣಾಧಿಕರಣದಲ್ಲಿ ಆರುಣ್ಯದ ಯೋಗವು ಎಲ್ಲ ವಸ್ತುಗಳಿಗೂ ಇಲ್ಲ, ಕೇವಲ ಪಶುವಿಗೆ ಮಾತ್ರ ಎಂದು ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಸೋಮಂ ಕ್ರೀಣಾತಿ ಎಂಬ ವಾಕ್ಯದ ಸಂದರ್ಭದಲ್ಲಿ ಸಿದ್ಧಾಂತಿಸಿದ್ದಾನೆ ಜೈಮಿನಿ. ಎಲ್ಲ ವಸ್ತುಗಳಿಗೆ ಆರುಣ್ಯದ (ಅರುಣವರ್ಣದ = ಕೆಂಪು ಬಣ್ಣದ) ಯೋಗವನ್ನು ಕಲ್ಪಿಸುತ್ತಿರುವ ವರದರಾಜಸ್ವಾಮಿಯ ಪಾದಕಾಂತಿಯು ಆ ಸಿದ್ಧಾಂತವನ್ನು ಭಗ್ನ ಮಾಡುತ್ತಿದೆ. ಆದ್ದರಿಂದ ಆ ಜೈಮಿನಿಯ ಇನ್ನೊಂದು ಸಿದ್ಧಾಂತವಾದ ದೇವತಾಮೂರ್ತಿನಿರಾಕರಣವೂ ಭಗ್ನವಾದಂತೆ ಎಂದು ಕವಿ ಇಲ್ಲಿ ಸೂಚಿಸುತ್ತಿದ್ದಾನೆ. ಭಕ್ತರ ಉದ್ಧಾರಕ್ಕೆ ಸಗುಣದೇವತೋಪಾಸನೆ ಅತ್ಯಾವಶ್ಯಕ ವೆಂದು ಇದರ ತಾತ್ಪರ್ಯ.

**ಅಂತಸ್ತಮಾಂಸಿ ಯಮಿನಾಮಪಸಾರಯಂತೀ**
**ಹೃತ್ಪಂಕಜಾನ್ಯಪಿ ಚ ನಾಥ ವಿಕಾಸಯಂತೀ ।**
**ಭಕ್ತಪ್ರವೇಕಭವವಾರಿನಿಧೇಸ್ತರಣ್ಯೋ-**
**ಸ್ತ್ವತ್ಪಾದಯೋರ್ಜಯತಿ ಕಾಪಿ ಮಯೂಖಮಾಲಾ ॥ ೩೭ ॥**

**ಅನುವಾದ** : ಜಗನ್ನಾಥ ವರದರಾಜ, ನಿನ್ನ ಪಾದಗಳ ಅನಿರ್ವಚನೀಯ ಕಾಂತಿಕಿರಣಗಳ ಮಾಲೆಯು ಯೋಗಿಗಳ ಒಳಗತ್ತಲೆಯನ್ನು ಕಳೆಯುತ್ತದೆ, ಅವರ ಹೃದಯಕಮಲಗಳನ್ನು ಅರಳಿಸುತ್ತದೆ. ಅಲ್ಲದೆ, ಶ್ರೇಷ್ಠ ಭಕ್ತರು

ಸಂಸಾರ ಸಾಗರವನ್ನು ದಾಟುವುದಕ್ಕೆ ನೌಕೆಗಳಾಗಿ ಆ ಪಾದಗಳು ಸಹಾಯಕವಾಗುತ್ತವೆ. ಆ ಚರಣಮಯೂಖಮಾಲೆ ಎಲ್ಲೆಲ್ಲೂ ಜಯಿಸುತ್ತದೆ.

**ವಿವರಣೆ :** ಸೂರ್ಯನ ಕಿರಣಗಳ ಮಾಲೆಯು ಹೊರಗಿನ ಕತ್ತಲನ್ನು ಕಳೆದು ಸರೋವರಗಳಲ್ಲಿರುವ ತಾವರೆಗಳನ್ನು ಅರಳಿಸುತ್ತದೆ. ಭಗವಂತನ ಪಾದಗಳ ಕಿರಣಮಾಲೆಯು ಒಳಗಿನ ಅಂಧಕಾರವೆಂಬ ಕತ್ತಲೆಯನ್ನು ಕಳೆದು ಹೃದಯವೆಂಬ ಕಮಲವನ್ನು ಅರಳಿಸುತ್ತದೆ. ಪರಮಾತ್ಮನ ಪಾದಗಳೇ ಸಂಸಾರವೆಂಬ ಸಮುದ್ರವನ್ನು ದಾಟಿಸುವ ದೋಣಿಗಳು. ಅವುಗಳ ಅನಿರ್ವಚನೀಯ ಕಾಂತಿಮಾಲೆಯು ಜಯಿಸಲಿ - ಎಂದು ಇದರ ತಾತ್ಪರ್ಯ. ಭವ (ಸಂಸಾರ)ವೇ ವಾರಿನಿಧಿ (ಸಮುದ್ರ), ಅದಕ್ಕೆ ಭಗವಂತನ ಪಾದಗಳೇ ತರಣಿಗಳು (ನೌಕೆಗಳು) ಎಂದು ವರ್ಣಿಸಿರುವುದರಿಂದ ರೂಪಕ.

ಮುಷ್ಣನ್ ಪ್ರಭಾತಸಮಯೇಷು ಮುರಾಂತಕಾರಿನ್
ಅಂಘ್ರಿದ್ವಯಶ್ರಿಯಮಹಸ್ಕರತಸ್ಕರಸ್ತೇ ।
ಯತ್ಪ್ರಾಪ್ಯತೇ ನ ಕರಭಂಗಮಮುಷ್ಯ ಬಾಲ-
ಮಿತ್ರತ್ವಮೇವ ಮಿಷತಿ ಧ್ರುವಮತ್ರ ಹೇತುಃ ॥ ೩೮ ॥

**ಅನುವಾದ :** ಮುರಾರಿ, ಪ್ರಾತಃಕಾಲದಲ್ಲಿ ಸೂರ್ಯನೆಂಬ ಕಳ್ಳನು ನಿನ್ನ ಪಾದದ್ವಯದ ಅರುಣಕಾಂತಿಯನ್ನು ಕದಿಯುತ್ತಾನೆ. ಆದರೆ ಅವನಿಗೆ ಕರಗಳ (ಕೈಗಳ ಹಾಗೂ ಕಿರಣಗಳ) ಛೇದವಾಗುವುದಿಲ್ಲ. ಅದಕ್ಕೆ ಕಾರಣ ನಿಶ್ಚಿತವಾಗಿ ಆ ಸೂರ್ಯನ ಬಾಲಮಿತ್ರತ್ವವೇ ಆಗಿದೆಯೆಂದು ತೋರುತ್ತದೆ.

**ವಿವರಣೆ :** ಬೆಳಗಿನ ಜಾವದಲ್ಲಿ ಅರುಣೋದಯದ ವೇಳೆಯಲ್ಲಿ ಮೂಡಿಬರುವ ಸೂರ್ಯ ತುಂಬಾ ಕೆಂಪಗಿರುತ್ತಾನೆ. ವರದರಾಜನ ಪಾದಗಳಲ್ಲಿದ್ದ ಅರುಣಕಾಂತಿಯನ್ನು ಕದ್ದು ಅದರಿಂದಲೇ ಕೆಂಪಗಾಗಿದ್ದಾನೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ. ಕರ ಶಬ್ದಕ್ಕೆ ಕೈ ಮತ್ತು ಕಿರಣ ಎಂಬ ಎರಡು ಅರ್ಥಗಳು. ಪ್ರತಿದಿನವೂ ಕದಿಯುವವನಿಗೆ ಕೈ ಕತ್ತರಿಸುವ ಶಿಕ್ಷೆಯನ್ನು

ಕೊಡಬೇಕು. ಆದರೂ ಸೂರ್ಯನಿಗೇಕೆ ಕರಚ್ಛೇದವಾಗಿಲ್ಲ ? ಏಕೆಂದರೆ ಅವನು ಬಾಲಮಿತ್ರ. ಈ ಬಾಲಮಿತ್ರ ಎಂಬ ಪದಕ್ಕೂ ಎರಡು ಅರ್ಥಗಳಿವೆ. ಎಳೆಯ ಸೂರ್ಯ ಎಂದು ಒಂದು ಅರ್ಥವಾದರೆ ಚಿಕ್ಕಂದಿನ ಗೆಳೆಯ ಎಂದು ಇನ್ನೊಂದು ಅರ್ಥ. ಮಕ್ಕಳಿಗೂ ಮಿತ್ರರಿಗೂ ಯಾವ ಅಪರಾಧಕ್ಕೂ ಮಹಾತ್ಮರು ಶಿಕ್ಷೆ ಕೊಡುವುದಿಲ್ಲವಾದ್ದರಿಂದ ಅದೇ ಸೂರ್ಯನಿಗೆ ಶಿಕ್ಷೆಯಾಗದಿರಲು ಕಾರಣವೆಂದು ಕವಿಯ ಕಲ್ಪನೆ. ಹೇತೂತ್ಪ್ರೇಕ್ಷೆ.

**ಅಂಘ್ರಿದ್ವಯಸ್ಯ ತವ ಸಂತತಮಂತರಂಗ-**
**ಮಂಭೋಜವರ್ಗಮಿಹ ಯೋಜಯತಿ ಶ್ರಿಯಾ ಯತ್ ।**
**ಉತ್ಕೋಚದಾನಮಿದಮುಷ್ಣಕರಸ್ಯ ಬಾಲ್ಯಾತ್**
**ಸತ್ಕಾಂತಿರತ್ನಚಯಚೋರಣತತ್ಪರಸ್ಯ ॥ ೩೯ ॥**

**ಅನುವಾದ** : ಬಾಲ್ಯದಿಂದಲೂ ಪಾದಕಾಂತಿಯೆಂಬ ರತ್ನವನ್ನು ಕದಿಯುವುದರಲ್ಲಿ ನಿರತನಾದ ಸೂರ್ಯನು ಆ ಪಾದಗಳಿಗೆ ಆಪ್ತಸ್ನೇಹಿತರೆನಿಸಿದ ಕಮಲಗಳ ಸಮೂಹಕ್ಕೆ ಕಾಂತಿಯನ್ನು ತಂದುಕೊಡುವುದೇನಿದೆಯೋ ಅದು ಕೇವಲ ಲಂಚವನ್ನು ಅವನು ಕೊಟ್ಟಂತಾಯಿತಷ್ಟೆ.

**ವಿವರಣೆ** : ಕೆಂಪುಬಣ್ಣದ ತಾವರೆಹೂಗಳು ಪರಮಾತ್ಮನ ಪಾದಗಳಂತೆ ಕಾಣುವುದರಿಂದ ಅವು ಪರಸ್ಪರ ಆಪ್ತರೆಂದು ಕವಿಸಮಯಸಿದ್ಧವಾಗುತ್ತದೆ. ಹಿಂದಿನ ಪದ್ಯದಲ್ಲಿ ತಿಳಿಸಿದಂತೆ ಬಾಲಸೂರ್ಯನು ಪರಮಾತ್ಮನ ಪಾದಗಳ ಅರುಣಕಾಂತಿಯನ್ನು ದಿನವೂ ಕದಿಯುತ್ತಾನೆ. ಅನಂತರ ಅವನು ತಾವರೆಗಳನ್ನು ಅರಳಿಸಿ ಅವುಗಳಿಗೆ ಸೌಂದರ್ಯವನ್ನು ತುಂಬುತ್ತಾನೆ. ಇದನ್ನು ನೋಡಿ ಕವಿಯು ಸೂರ್ಯನು ಪರಮಾತ್ಮನ ಪಾದಗಳಿಗೆ ಆಪ್ತರೆನಿಸಿದ ತಾವರೆ ಹೂಗಳಿಗೆ ಲಂಚವನ್ನು ಕೊಟ್ಟು ತನ್ನ ಅಪರಾಧಕ್ಕೆ ಶಿಕ್ಷೆಯಾಗದಿರುವಂತೆ ಪ್ರಯತ್ನಿಸುತ್ತಾನೆ ಎಂದು ಕವಿ ಈ ಪದ್ಯದಲ್ಲಿ ಉತ್ಪ್ರೇಕ್ಷಿಸಿದ್ದಾನೆ. ಸ್ವರೂಪೋತ್ಪ್ರೇಕ್ಷಾಲಂಕಾರ.

**ಭಾನುರ್ನಿಶಾಸು ಭವದಂಘ್ರಿಮಯೂಖಶೋಭಾ-**
**ಲೋಭಾತ್ ಪ್ರತಪ್ಯ ಕಿರಣೋತ್ಕರಮಾಪ್ರಭಾತಮ್ ।**
**ತತ್ರೋದ್ಧೃತೇ ಹುತವಹಾತ್ ಕ್ಷಣಲುಪ್ತರಾಗೇ.**
**ತಾಪಂ ಭಜತ್ಯನುದಿನಂ ಸ ಹಿ ಮಂದತಾತಃ ॥ ೪೦ ॥**

**ಅನುವಾದ** : ವರದರಾಜ, ನಿನ್ನ ಅಂಗಾಲಿನ ಕೆಂಪು ಕಿರಣಗಳ ಸೌಂದರ್ಯವು ತನ್ನ ಕಿರಣಗಳಿಗೂ ಬೇಕೆಂಬ ಲೋಭದಿಂದ ಸೂರ್ಯನು ರಾತ್ರಿಯ ವೇಳೆಯಲ್ಲಿ ಅವುಗಳನ್ನು ಅಗ್ನಿಯಲ್ಲಿಟ್ಟು ಚೆನ್ನಾಗಿ ಕಾಯಿಸಿ ಕೊಳ್ಳುತ್ತಾನೆ. ಬೆಳಗಿನವರೆಗೂ ಹಾಗೆ ಮಾಡಿ, ಬೆಳಗಿನ ಜಾವದಲ್ಲಿ ಆ ಕಿರಣಜಾಲದೊಡನೆ ಕಾಣಿಸಿಕೊಳ್ಳುತ್ತಾನೆ. ಸ್ವಲ್ಪ ಕಾಲದಲ್ಲೇ ಆ ಕಿರಣಗಳ ಕೆಂಪುಕಾಂತಿ ಮಾಯವಾಗುತ್ತದೆ. ಆಮೇಲೆ ಪ್ರತಿದಿನವೂ ಅವನು ಸಂತಾಪವನ್ನು ಅನುಭವಿಸುತ್ತಾನೆ. ಎಷ್ಟಾದರೂ ಅವನು ಮಂದನ (ಶನಿಯ) ತಂದೆಯಲ್ಲವೆ ?

**ವಿವರಣೆ** : *'ಅಗ್ನಿಂ ವಾ ಆದಿತ್ಯಃ ಸೂರ್ಯಂ ಪ್ರವಿಶತಿ'* ಎಂಬ ಶ್ರುತಿವಾಕ್ಯವು ರಾತ್ರಿಯ ವೇಳೆ ಸೂರ್ಯನು ಅಗ್ನಿಯನ್ನು ಪ್ರವೇಶಿಸುತ್ತಾನೆಂದು ಹೇಳುತ್ತದೆ. ಅದರ ಆಧಾರದ ಮೇಲೆ ಕವಿ ಇಲ್ಲಿ ಅದರ ಕಾರಣವನ್ನು ಉತ್ಪ್ರೇಕ್ಷಿಸಿದ್ದಾನೆ. ವರದರಾಜನ ಪಾದಗಳ ಕೆಂಪುಕಾಂತಿಯು ತನ್ನ ಕಿರಣಗಳಿಗೂ ಬೇಕೆಂದು ಅವನ್ನು ಕಾಯಿಸಿ ಕೆಂಪಾಗಿ ಮಾಡಿಕೊಳ್ಳಲು ಸೂರ್ಯ ಹಾಗೆ ಮಾಡುವನೆಂದು ಕವಿಯ ಕಲ್ಪನೆ. ಎಷ್ಟು ಪ್ರಯತ್ನಪಟ್ಟರೂ ಸ್ವಲ್ಪಕಾಲ ಮಾತ್ರ ಬೆಳಗಿನ ಜಾವದಲ್ಲಿ ಸೂರ್ಯನ ಕಿರಣಗಳಿಗೆ ಅಂಥ ಕೆಂಪುಕಾಂತಿ ಬರುತ್ತದೆ. ಆಮೇಲೆ ಅದು ಮಾಯವಾಗುತ್ತದೆ. ಮತ್ತೆ ರಾತ್ರಿಯಾದಾಗ ಸೂರ್ಯನು ಅದೇ ಪ್ರಯತ್ನವನ್ನು ಮುಂದುವರಿಸುತ್ತಾನೆ. ಪ್ರತಿದಿನ ತನ್ನ ಪ್ರಯತ್ನ ವಿಫಲವಾದರೂ ಸೂರ್ಯ ಮತ್ತೆ ಮತ್ತೆ ಹಾಗೆ ಮಾಡುವುದರ ಕಾರಣವೇನು ? ಅದು ಅವನ ದಡ್ಡತನ. ಸೂರ್ಯ ಶನಿಯ, ಅಂದರೆ ಮಂದನ, ತಂದೆಯಲ್ಲವೇ. ಮಗನಂತೆ ತಂದೆಗೂ ಮಂದಬುದ್ಧಿ ಅದರಿಂದಲೇ ಅವನು ಪ್ರತಿದಿನವೂ ವಿಫಲ ಯತ್ನವನ್ನು ಮಾಡುತ್ತಾನೆ ಎಂದು ಕವಿಯ ಉತ್ಪ್ರೇಕ್ಷೆ. ಕಾವ್ಯಲಿಂಗಾಲಂಕಾರ. ಸೂರ್ಯನು ಯಾವ ಫಲಕ್ಕಾಗಿ ಅಗ್ನಿಪ್ರವೇಶವನ್ನು ಮಾಡುತ್ತಾನೋ, ಅದು ತಾತ್ಕಾಲಿಕವಾಗಿ

ಮಾತ್ರ ಸಿದ್ಧವಾಗುತ್ತದೆ. ಸಂಪೂರ್ಣವಾದ ಇಷ್ಟಸಿದ್ಧಿ ಆಗುವುದಿಲ್ಲ ಎಂದು ವರ್ಣಿಸಿರುವುದರಿಂದ ಇಲ್ಲಿ ವಿಷಮಾಲಂಕಾರವೂ ಇದೆಯೆಂದು ಕುವಲಯಾನಂದದಲ್ಲಿ ಹೇಳಿದೆ.

**ತೌಲ್ಯಂ ವದಂತು ಕವಯಸ್ತರುಪಲ್ಲವಾನಾಂ**
**ಮುಗ್ಧಾಸ್ತ್ವದೀಯಚರಣೇನ ಮುಕುಂದ ಕಿಂ ತೈಃ ।**
**ತಾನ್ಯೇವ ತತ್ತದಧರೋಷ್ಠಮಿಷಾತ್ತದಾನೀಂ**
**ಕಂಪಂ ಭಜಂತಿ ಕಥಯಂತಿ ಕಿಲಾತ್ಮನೈಚ್ಯಮ್ ॥ ೪೧ ॥**

**ಅನುವಾದ :** ಮುಕುಂದ, ಮಂದಬುದ್ಧಿಯ ಕವಿಗಳು ನಿನ್ನ ಪಾದಗಳಿಗೆ ಚಿಗುರುಗಳ ಸಾಮ್ಯವನ್ನು ಹೇಳಿಕೊಳ್ಳಲಿ, ಅದರಿಂದ ಏನು ? ಆ ಚಿಗುರುಗಳೇ ಜನರ ತುಟಿಗಳ ರೂಪದಲ್ಲಿ ನಿಂತು ನಡುಗುತ್ತಾ ತಾವು ನಿನ್ನ ಪಾದಗಳಿಗಿಂತ ಹೀನವೆಂದು ಹೇಳುತ್ತಿವೆಯಲ್ಲವೆ ?

**ವಿವರಣೆ :** ಸಾಮಾನ್ಯವಾಗಿ ಕವಿಗಳು ಪಾದಗಳಿಗೂ ಚಿಗುರಿಗೂ ಹೋಲಿಕೆಯನ್ನು ಕೊಡುತ್ತಾರೆ. ಎರಡೂ ಕೆಂಪಾಗಿರುವುದೂ ಮೃದುವಾಗಿರುವುದೂ ಕಾರಣ. ಹಾಗೆ ಕೆಲವು ಕವಿಗಳು ಪರಮಾತ್ಮನ ಪಾದಗಳಿಗೆ ಚಿಗುರು ಸದೃಶವೆಂದು ವರ್ಣಿಸಿದರೂ ಅದು ಸರಿಯಲ್ಲವೆಂದು ಈ ಕವಿ ಹೇಳುತ್ತಾನೆ. ಆ ಚಿಗುರುಗಳಿಗೆ ಗೊತ್ತು, ತಾವು ಪರಮಾತ್ಮನ ಪಾದಗಳಿಗೆ ಸಮಾನವಲ್ಲ ಎಂದು. ಅವು ಜನರ ತುಟಿಗಳ ರೂಪವನ್ನು ಪಡೆದು ಮಾತನಾಡುವಾಗ ನಡುಗುತ್ತಾ ತಾವು ಪರಮಾತ್ಮನಪಾದಗಳಿಗೆ ಸಮಾನವಲ್ಲವೆಂದು ತಿಳಿಸುತ್ತಿವೆ ಎಂದು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ. ಅಧರೋಷ್ಠಮಿಷಾತ್ ಎಂಬಲ್ಲಿ ವ್ಯಾಜಾಪಹ್ನುತಿ ಎಂಬ ಅಲಂಕಾರ.

**ಪದ್ಮೋಪಮಾತ್ ಪದಯುಗಾತ್ತವ ರತ್ನಗರ್ಭಾ**
**ಜಾತೇತಿ ಪದ್ಮಸದೃಶಾಕೃತಿಮಾಹುರೇನಾಮ್ ।**
**ಕಾರ್ಯಂ ಹಿ ಕಾರಣಗುಣಾನತಿವರ್ತಿ ಲೋಕೇ**
**ಪ್ರಾಯಃ ಪತಂಗಪತಿವಾಹ ವಿಲೋಕಯಾಮಃ ॥ ೪೨ ॥**

**ಅನುವಾದ :** ಗರುಡವಾಹನನಾದ ವರದರಾಜನೆ, ಪದ್ಮಸದೃಶವಾದ ನಿನ್ನ

ಪಾದಯುಗ್ಮದಿಂದ 'ರತ್ನಗರ್ಭಾ' ಎನಿಸಿದ ಭೂಮಿಯು ಹುಟ್ಟಿದ ಕಾರಣದಿಂದ ಪದ್ಮದಂತೆ ಇರುವಳೆಂದು ಅವಳನ್ನು (ಪೌರಾಣಿಕರು) ವರ್ಣಿಸುತ್ತಾರೆ. ಜಗತ್ತಿನಲ್ಲಿ ಪ್ರಾಯಶಃ ಕಾರ್ಯವು ಕಾರಣದ ಗುಣಗಳನ್ನು ಮೀರದೆ ಇರುವುದನ್ನು ಕಾಣುತ್ತೇವೆ.

**ವಿವರಣೆ** : ಕಾರಣದಲ್ಲಿರುವ ಗುಣಗಳು ಪ್ರಾಯಶಃ ಕಾರ್ಯದಲ್ಲಿ ಕಾಣುತ್ತವೆ. ಭೂಮಿಯು ಪರಮಾತ್ಮನ ಪಾದಯುಗ್ಮದಲ್ಲಿ ಹುಟ್ಟಿದುದರಿಂದ ಪಾದಗಳು ಕಾರಣ, ಭೂಮಿ ಕಾರ್ಯ. 'ಪದ್ಭ್ಯಾಂ ಭೂಮಿರ್ದಿಶಃ ಶ್ರೋತ್ರಾತ್' ಎಂಬ ಶ್ರುತಿ ಇಲ್ಲಿ ಪ್ರಮಾಣ. ಕಾರಣವಾದ ಪಾದವು ಪದ್ಮದಂತಿರುವುದರಿಂದ ಕಾರ್ಯವಾದ ಭೂಮಿಯೂ ಪದ್ಮದಂತಿದೆಯೆಂದು ಪುರಾಣಗಳಲ್ಲಿ ವರ್ಣಿಸಲಾಗಿದೆ.

ವಾಮನಪುರಾಣದಲ್ಲಿ –

*ಭೂಮಿಂ ತು ಪಂಕಜಾಕಾರಾಂ ತನ್ಮಧ್ಯೇ ಕರ್ಣಿಕಾಕೃತಿಮ್ ।*
*ಮೇರುಂ ದದರ್ಶ ಶೈಲೇಂದ್ರ ಶಾತಕುಂಭಂ ಮಹದ್ಧಿಮಮ್ ॥*

ಎಂದು ಭೂಮಿಯನ್ನು ಪದ್ಮದ ಆಕಾರವುಳ್ಳದ್ದೆಂದು ವರ್ಣಿಸಲಾಗಿದೆ.

ವಿಶಿಷ್ಟ ವಾಕ್ಯಾರ್ಥವನ್ನು ಸಾಮಾನ್ಯ ವಾಕ್ಯಾರ್ಥದಿಂದ ಸಮರ್ಥಿಸಿರುವುದರಿಂದ ಇಲ್ಲಿ ಅರ್ಥಾಂತರನ್ಯಾಸವೆಂಬ ಅಲಂಕಾರ.

**ಕಲ್ಯಾಣಶಾಲಿ ಕಮಲಾಕರಲಾಲನೀಯಮ್**
**ಆಸೇವಕಶ್ರುತಿಮನೋಹರನಾದಿಹಂಸಮ್ ।**
**ಆಮೋದಮೇದುರಮರುನ್ನಮಿತಾಲಿಕಾಂತಂ**
**ಶಂಕೇ ತವೇಶ್ವರ ಪದಂ ಶತಪತ್ರಮೇವ ॥ ೪೩ ॥**

**ಅನುವಾದ** : ಜಗದೀಶ್ವರನೆ, ಮಂಗಳಮಯವೂ, ಲಕ್ಷ್ಮಿಯ ಕೈಯಿಂದ ಲಾಲಿತವಾದುದೂ, ಸೇವೆಗಾಗಿ ಪ್ರವೃತ್ತವಾದ ವೇದನಾದವನ್ನು ಮಾಡುವ ಜ್ಞಾನಿಗಳಿಂದ ಆಶ್ರಿತವಾದುದೂ (ಕಿವಿಗೆ ಇಂಪಾದ ಶಬ್ದವನ್ನು ಮಾಡುವ ಹಂಸಪಕ್ಷಿಗಳಿಂದ ಸೇವಿತವಾದುದೂ), ಸಂತೋಷಭರಿತರಾದ ದೇವತೆಗಳಿಂದ ನಮಸ್ಕೃತವಾದುದೂ (ಪರಿಮಳದಿಂದ ತುಂಬಿದ ಗಾಳಿಯಿಂದ

ಬಗ್ಗಿದುದೂ,) ಭ್ರಮರಗಳಿಂದ ಸುಂದರವಾದುದೂ ಆದ ನಿನ್ನ ಪಾದವು ಕಮಲವೇ ಎಂದು ನಾನು ಭಾವಿಸುತ್ತೇನೆ.

**ವಿವರಣೆ :** ಲಕ್ಷ್ಮಿಯು ಪರಮಾತ್ಮನ ಪಾದಗಳನ್ನು ತನ್ನ ಕೈಗಳಿಂದ ಒತ್ತಿ ಸೇವಿಸುತ್ತಾಳೆ. ಆಕೆ ಕೈಯಲ್ಲಿ ಕಮಲವನ್ನು ಹಿಡಿದಿರುತ್ತಾಳೆ. ಪರಮಾತ್ಮನ ಪಾದಗಳನ್ನು ಹಂಸರು (ಜ್ಞಾನಿಗಳಾದ ಸಂನ್ಯಾಸಿಗಳು) ಶ್ರುತಿಮನೋಹರ ರಸದಿಂದ, ಎಂದರೆ ವೇದವಾಕ್ಯಗಳಿಂದ ಸೇವಿಸುತ್ತಾರೆ. ಮರುತ್ತುಗಳು (ಪರಿಮಳಭರಿತವಾದ ಗಾಳಿ ಅಥವಾ ಸಂತೋಷಭರಿತರಾದ ದೇವತೆಗಳು) ಕಮಲವನ್ನು ಬಗ್ಗಿಸುತ್ತವೆ (ಅಥವಾ ತಮ್ಮ ಹಣೆಯನ್ನು ಮುಟ್ಟಿಸಿ ನಮಸ್ಕರಿಸುತ್ತವೆ), ಅಲಿ ಎಂದರೆ ಭ್ರಮರ, ಅದು ಕಮಲವನ್ನು ಸುಂದರಗೊಳಿಸುತ್ತದೆ. ಅಲಿಕ ಎಂದರೆ ಹಣೆ. ಅಲಿಕ+ಅಂತ, ಅಲಿ+ಕಾಂತ ಎಂದು ಇಲ್ಲಿ ಸಭಂಗಶ್ಲೇಷ. ಹೀಗೆ ಶ್ಲೇಷದಿಂದ ಸಮಾನಧರ್ಮ ಬರುವುದರಿಂದ ಪರಮಾತ್ಮನ ಪಾದವೇ ಕಮಲ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

**ಸ್ಪರ್ಶಂ ಯಯೋಃ ಸಮಧಿಗಮ್ಯ ಝಟಿತ್ಯಹಲ್ಯಾ**
**ದೇವೀ ಚ ಭೂರಭವದುಜ್ಝಿತಸರ್ವಪಂಕಾ ।**
**ತಾಭ್ಯಾಂ ಘಟೇತ ಸಮತಾ ಭವತಃ ಪದಾಭ್ಯಾಮ್**
**ಆಜನ್ಮಪಂಕವಸತೇಃ ಕಥಮಂಬುಜಸ್ಯ ॥ ೪೪ ॥**

**ಅನುವಾದ :** ಪರಮಾತ್ಮನ ಯಾವ ಪಾದಗಳ ಸ್ಪರ್ಶಮಾತ್ರದಿಂದಲೇ ಅಹಲ್ಯೆಗೂ ಭೂದೇವಿಗೂ ಪಾಪದಿಂದ ವಿಮೋಚನೆ ಸಿಕ್ಕಿತೋ, ಆ ಪಾದಗಳಿಗೂ, ಸದಾ ಪಂಕ (ಕೆಸರು ಅಥವಾ ಪಾಪ)ದಲ್ಲಿರುವ ಕಮಲಕ್ಕೂ ಸಾಮ್ಯವು ಹೇಗೆ ಹೊಂದುತ್ತದೆ ?

**ವಿವರಣೆ :** ರಾಮಾವತಾರದಲ್ಲಿ ಪರಮಾತ್ಮನ ಪಾದದ ಸ್ಪರ್ಶದಿಂದ ಅಹಲ್ಯೆ ಪಾಪವಿಮುಕ್ತಳಾದಳು. ಕೃಷ್ಣಾವತಾರದಲ್ಲಿ ಅವನ ಪಾದಗಳ ಸ್ಪರ್ಶದಿಂದ ಸಮಸ್ತ ಭೂಮಂಡಲದ ಪಾಪಗಳು ನೀಗಿದವು. ಅಂಥ ಪಾದಗಳನ್ನು ಪಂಕದಲ್ಲಿ ಹುಟ್ಟಿ ಪಂಕದಲ್ಲೇ ಸದಾ ನಿಂತಿರುವ ತಾವರೆಗಳಿಗೆ ಹೇಗೆ

ಹೋಲಿಸಲು ಸಾಧ್ಯ ? ಇಲ್ಲಿ ಪಂಕ ಎಂಬ ಶಬ್ದಕ್ಕೆ ಪಾಪ, ಕೆಸರು ಎಂಬ ಎರಡು ಅರ್ಥಗಳಿರುವುದರಿಂದ ಆ ಶ್ಲೇಷವನ್ನು ಆಶ್ರಯಿಸಿ ಪರಮಾತ್ಮನ ಪಾದಗಳ ಅಗ್ಗಳಿಕೆಯನ್ನು ಹೊಗಳಿದೆ.

**ಮಾತಂಗಶೈಲಮಣಿಶೇಖರ ತೇ ಪದಾಭ್ಯಾಂ**
**ಮೋಹೇನ ಸಾಮ್ಯಮನುಚಿಂತ್ಯ ಕೃತಾಪರಾಧಮ್ ।**
**ಶಂಕೇ ಸರೋಜಮನಯೋರುಭಯೋರುಪೇತ್ಯ**
**ರೇಖಾಚ್ಛಲೇನ ಸತತಂ ವಿದಧಾತಿ ಸೇವಾಮ್ ॥ ೪೫ ॥**

**ಅನುವಾದ :** ಹಸ್ತಿಗಿರಿಯ ರತ್ನಶೇಖರದಂತೆ ಶೋಭಿಸುವ ವರದರಾಜ, ಕಮಲವು ಮೋಹದಿಂದ ನಿನ್ನ ಪಾದಗಳ ಸಾಮ್ಯವು ತನಗಿದೆಯೆಂದು ಚಿಂತಿಸಿ ಅಪರಾಧ ಮಾಡಿತು. ಆಮೇಲೆ ಸರಿಯಾಗಿ ಆಲೋಚಿಸಿ (ಆ ಅಪರಾಧದ ದೋಷವನ್ನು ಪರಿಹರಿಸಿಕೊಳ್ಳುವುದಕ್ಕಾಗಿ) ತಾನೇ ನಿನ್ನ ಪಾದಗಳಲ್ಲಿ ರೇಖಾರೂಪವಾಗಿ ನಿಂತು ಆ ಪಾದಗಳ ಸೇವೆಯನ್ನು ಮಾಡುತ್ತಿದೆಯೆಂದು ಊಹಿಸುತ್ತೇನೆ.

**ವಿವರಣೆ :** ಸಾಮುದ್ರಿಕ ಶಾಸ್ತ್ರಾನುಸಾರವಾಗಿ ಮಹಾನುಭಾವರ ಪಾದಗಳಲ್ಲಿ ಪದ್ಮರೇಖೆ ಇರುತ್ತದೆ. ಆ ಪದ್ಮರೇಖೆ ನಿಜವಾಗಿ ಪದ್ಮವೇ. ತನ್ನ ಅಪರಾಧವನ್ನು ಮನ್ನಿಸಬೇಕೆಂದು ಕೇಳಿಕೊಳ್ಳಲು ಪದ್ಮವೇ ಪಾದಗಳಿಗೆ ಸತತವಾಗಿ ಸೇವೆಯನ್ನು ಮಾಡುತ್ತಿದೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

**ಲೇಖಾಧಿನಾಥವನಪಲ್ಲವಧೈರ್ಯಚೋರೇ**
**ರೇಖಾಮಯಂ ಪದತಲೇ ಕಮಲಂ ಯದೇತತ್ ।**
**ತತ್ರೈವ ವಿಶ್ರಮಜುಷೋऽಚ್ಯುತ ರಾಗಲಕ್ಷ್ಮ್ಯಾಃ**
**ಕ್ರೀಡಾನಿಶಾಂತಕಮಲಂ ತದಿತಿ ಪ್ರತೀಮಃ ॥ ೪೬ ॥**

**ಅನುವಾದ :** ಅಚ್ಯುತ, ದೇವತೆಗಳ ಒಡೆಯನಾದ ಇಂದ್ರನ ನಂದನವನದ ಕಲ್ಪವೃಕ್ಷಗಳ ಕಾಂತಿಯನ್ನು ಅಪಹರಿಸುವ ನಿನ್ನ ಪಾದತಳದಲ್ಲಿ ಕಾಣುವ

ಕಮಲದ ರೇಖೆಯು ಅಲ್ಲೇ ವಿಶ್ರಾಂತಿಯನ್ನು ಬಯಸಿ ನೆಲೆಸಿರುವ ರಾಗಲಕ್ಷ್ಮಿಯ ಕ್ರೀಡಾಗೃಹವಾದ ಕಮಲವೆಂದು ತಿಳಿಯುತ್ತೇವೆ.

**ವಿವರಣೆ :** ಪರಮಾತ್ಮನ ಪಾದತಲವು ಕಲ್ಪವೃಕ್ಷಗಳ ಚಿಗುರಿಗಿಂತಲೂ ಹೆಚ್ಚು ಸುಂದರವಾಗಿದೆ. ಅದರಲ್ಲಿ ಪದ್ಮರೇಖೆಗಳಿವೆ. ಆ ಪದ್ಮವೇ ರಾಗಲಕ್ಷ್ಮಿಯ ನಿವಾಸಸ್ಥಾನವಾದ ಕಮಲ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ. ಲಕ್ಷ್ಮೀ ಶಬ್ದಕ್ಕೆ ಕಾಂತಿ ಎಂಬ ಅರ್ಥವೂ ಇರುವುದು ಇದಕ್ಕೆ ಆಧಾರವಾಗಿದೆ.

**ಯಸ್ಯಾಃ ಸ್ವಮೂರ್ತ್ಯನುಗುಣಾಕೃತಿಶಕ್ತಿಯುಕ್ತಃ**
**ಪಾದಾಂಬುಜದ್ವಯಮಿಷಾತ್ ಕಮಠಾಧಿರಾಜಃ ।**
**ಮೂಲೇ ವಸತ್ಯುಚಿತಮೇವ ನಿಗದ್ಯತೇ ಸಾ**
**ಮೂರ್ತಿರ್ಮಹಾಪುರುಷ ತೇಽಖಿಲಲೋಕರೂಪಾ ॥ ೪೭ ॥**

**ಅನುವಾದ :** ಮಹಾಪುರುಷ ವರದರಾಜ, ನಿನ್ನ ಮೂಲದಲ್ಲಿ (ಕಾಲಿನ ತಳದಲ್ಲಿ) ಪಾದಾಂಬುಜದ ನೆವದಿಂದ ಕೂರ್ಮರಾಜನು ತನ್ನ ಮೂರ್ತಿಗೆ ಅನುಗುಣವಾದ ಶಕ್ತಿಯಿಂದೊಡಗೂಡಿ ವಾಸಿಸುತ್ತಾನೆ. ಇದರಿಂದ ನಿನ್ನ ಮೂರ್ತಿಯು ಅಖಿಲಲೋಕರೂಪವಾಗಿದೆ ಎಂದು ಪುರಾಣಗಳಲ್ಲಿ ಹೇಳಿರುವುದು ಉಚಿತವಾಗಿಯೇ ಇದೆ.

**ವಿವರಣೆ :** ಪುರಾಣಗಳಲ್ಲಿ 'ಪಾತಾಲಮೇವಾಸ್ಯ ಹಿ ಪಾದಮೂಲಮ್' ಎಂದು ವರ್ಣಿಸಲಾಗಿದೆ. ಇದರಿಂದ ಪರಮಾತ್ಮನ ಪಾದಮೂಲವೇ ಪಾತಾಳ ಎಂದು ಸಿದ್ಧವಾಗುತ್ತದೆ. ಅಲ್ಲಿ ಕೂರ್ಮರಾಜನು ತನ್ನ ಶಕ್ತಿಯಿಂದ ಲಕ್ಷ್ಮಿಯೊಡನೆ ಇರುವುದು ಉಚಿತ. ಆದ್ದರಿಂದ ಇಲ್ಲಿ ಪಾದಪದ್ಮಗಳನ್ನೇ ಕಮಠವೆಂದು ಹೇಳಿದೆ. ಈ ಕಾರಣದಿಂದ ಪರಮಾತ್ಮನ ಮೂರ್ತಿಯೇ ಅಖಿಲ ಲೋಕರೂಪವಾದುದೆಂದು ವರ್ಣಿಸುವುದೂ ಅತ್ಯಂತ ಉಚಿತವಾದುದೇ ಎಂದು ಕವಿ ಹೇಳುತ್ತಾನೆ. ಕೈತವಾಪಹ್ನುತಿಯೆಂಬ ಅಲಂಕಾರವು ಕಾವ್ಯಲಿಂಗದೊಡನೆ ಸಂಸೃಷ್ಟಿಯನ್ನು ಹೊಂದಿದೆ.

**ಕಿಂ ದ್ವಾದಶಾತ್ಮನಿ ರವೌ ಭಗವನ್ ಧೃತೇರ್ಷ್ಯಃ**
**ಚಂದ್ರಸ್ತತೋಽಪ್ಯಧಿಕತಾಮಧಿಗಂತುಮೇವ ।**
**ಏತೇ ತವೇಹ ದಶ ಭಾಂತಿ ಪದಾಂಗುಲೀಷು**
**ಸ್ವಾತ್ಮಾನ ಇತ್ಯಜನಿ ಚಿತ್ತದೃಗರ್ಣವೇಭ್ಯಃ ? ॥ ೪೮ ॥**

**ಅನುವಾದ** : ಭಗವಂತನೇ, ದ್ವಾದಶಾತ್ಮನಾದ ಸೂರ್ಯನಲ್ಲಿ ಅಸೂಯೆಯನ್ನು ಹೊಂದಿದ ಚಂದ್ರನು ಅವನಿಗಿಂತ ಅತಿಶಯವನ್ನು ಪಡೆಯಲು ಆಸೆಪಟ್ಟು, ಈ ನಿನ್ನ ಹತ್ತು ಕಾಲುಗುರುಗಳಲ್ಲಿ ತನ್ನ ಸ್ವರೂಪಗಳಿರುವುದರಿಂದ ಮತ್ತೆ ಮನಸ್ಸು, (ಅತ್ರಿಯ) ಕಣ್ಣು ಹಾಗೂ ಸಮುದ್ರಗಳಿಂದ ಹುಟ್ಟಿದನೇ ?

**ವಿವರಣೆ** : ದ್ವಾದಶಾತ್ಮಾ ದಿವಾಕರಃ ಎಂದು ಅಮರಕೋಶದಲ್ಲಿ ಹೇಳಿರುವಂತೆ ಸೂರ್ಯನಿಗೆ ಹನ್ನೆರಡು ರೂಪಗಳಿವೆ. ಇದನ್ನು ನೋಡಿ ಸಹಿಸಲಾರದ ಚಂದ್ರನು ತಾನು ಅದಕ್ಕಿಂತ ಹೆಚ್ಚು ಎಂದು ತೋರಿಸಿಕೊಳ್ಳಲು ತನಗೆ ಹದಿಮೂರು ರೂಪಗಳು ದೊರೆಯಬೇಕೆಂದು ಆಶಿಸುತ್ತಾನೆ. ವರದರಾಜಸ್ವಾಮಿಯ ಕಾಲುಗಳ ಹತ್ತು ಉಗುರುಗಳು ಕಾಂತಿಯಿಂದ ಚಂದ್ರನಂತೆ ಹೊಳೆಯುವುದರಿಂದ ಹತ್ತು ರೂಪಗಳು ಸಿದ್ಧವಾದುವು. ಆಮೇಲೆ 'ಚಂದ್ರಮಾ ಮನಸೋ ಜಾತಃ' ಎಂಬ ಶ್ರುತಿವಾಕ್ಯದಂತೆ ಪರಮಾತ್ಮನ ಮನಸ್ಸಿನಿಂದ ಹುಟ್ಟಿದಾಗ ಒಂದು ರೂಪ ದೊರೆಯಿತು. 'ಅತ್ರಿನೇತ್ರಸಮದ್ಭೂತಃ' ಎಂಬ ಪೌರಾಣಿಕ ಉಕ್ತಿಯ ಪ್ರಕಾರ ಅತ್ರಿ ಮಹರ್ಷಿಯ ಕಣ್ಣಿನಿಂದ ಹುಟ್ಟಿದಾಗ ಇನ್ನೊಂದು ರೂಪ ಸಿಕ್ಕಿತು. ಅನಂತರ ಸಮುದ್ರಮಥನದ ವೇಳೆಯಲ್ಲಿ ಇನ್ನೊಮ್ಮೆ ಹುಟ್ಟಿದಾಗ ಹದಿಮೂರನೆಯ ರೂಪವೂ ಅವನಿಗೆ ಉಂಟಾಯಿತು. ಹೀಗೆ ಚಂದ್ರನಿಗೆ ಸೂರ್ಯನಿಗಿಂತ ಒಂದು ಅಂಶ ಹೆಚ್ಚಾಯಿತು ಎಂದು ತಾತ್ಪರ್ಯ. ಇದರಿಂದ ವರದರಾಜಸ್ವಾಮಿಯ ನಖಗಳ ಕಾಂತಿ ಚಂದ್ರಸಮಾನ ಎಂದು ಹೇಳಿದಂತಾಗುತ್ತದೆ. ಸೂರ್ಯನಲ್ಲಿ ಚಂದ್ರನಿಗಿದ್ದ ಅಸೂಯೆಯು ಅವನ ಅನೇಕ ರೂಪಧಾರಣೆಗೆ ಕಾರಣವಲ್ಲವಾದರೂ ಹಾಗೆ ಸಂಭಾವಿತವಾದ್ದರಿಂದ ಉತ್ಪ್ರೇಕ್ಷೆ.

ಭಾಸಾ ಪದಂ ತವ ರಮಾಧಿಪ ಭೂಷಯಂತಿ
ಸಂಸೇವಕಾಂಶ್ಚ ವಿಬುಧಾನ್ ಪರಿತೋಷಯಂತಿ ।
ನಾಥ ಕ್ಷಿಪಂತಿ ಚ ತಮಾಂಸಿ ನಖೇಂದವಸ್ತೇ
ಸಂಶೋಷಯಂತ್ಯಪಿ ತು ಭಕ್ತಭವಾಂಬುರಾಶಿಮ್ ॥ ೪೯ ॥

**ಅನುವಾದ :** ರಮೆಗೆ ಅಧಿಪನಾದ ವರದರಾಜಸ್ವಾಮಿ, ನಿನ್ನ ಕಾಲಿನ ಉಗುರುಗಳ ರೂಪದಲ್ಲಿರುವ ಚಂದ್ರರು ಕಾಂತಿಯಿಂದ ಆಕಾಶವನ್ನು ತುಂಬುತ್ತಾರೆ. ಸೇವಕರಾಗಿ ವರ್ತಿಸುವ ದೇವತೆಗಳಿಗೆ ಸಂತೋಷವನ್ನು ನೀಡುತ್ತಾರೆ. ಎಲ್ಲ ಕತ್ತಲನ್ನೂ ತೊಲಗಿಸುತ್ತಾರೆ. ಆದರೆ, ಭಕ್ತರ ಸಂಸಾರವೆಂಬ ಸಮುದ್ರವನ್ನು ಒಣಗಿಸಿಬಿಡುತ್ತಾರೆ.

**ವಿವರಣೆ :** ಚಂದ್ರನು ತನ್ನ ಕಾಂತಿಯಿಂದ ಆಕಾಶವನ್ನು ತುಂಬುವುದು, ಅವನನ್ನು ಸೇವಿಸುವ ದೇವತೆಗಳಿಗೆ ಆನಂದವನ್ನು ಕೊಡುವುದು, ಕತ್ತಲನ್ನು ಹೊಡೆದೋಡಿಸುವುದು ಸ್ವಾಭಾವಿಕ. ಪರಮಾತ್ಮನ ನಖಚಂದ್ರರು ಇದೆಲ್ಲಾ ಮಾಡುತ್ತಾರೆ. ಆದರೆ ಚಂದ್ರನು ಸಮುದ್ರವನ್ನು ಉಕ್ಕಿಸಿ ಬೆಳೆಸುತ್ತಾನೆ. ಈ ನಖಚಂದ್ರರಾದರೋ ಅದಕ್ಕೆ ವಿರುದ್ಧವಾಗಿ ಭಕ್ತರ ಸಂಸಾರವೆಂಬ ಸಮುದ್ರವನ್ನು ಒಣಗಿಸಿ ಅದೃಶ್ಯವನ್ನಾಗಿ ಮಾಡುವುದು ವಿಶೇಷ. ಎಂದರೆ ಪರಮಾತ್ಮನ ಪಾದಗಳನ್ನು ಆಶ್ರಯಿಸಿದವರಿಗೆ ಮುಂದೆ ಜನನ-ಮರಣ ಚಕ್ರ ರೂಪವಾದ ಸಂಸಾರ ಇರುವುದಿಲ್ಲ. ಅವರಿಗೆ ಮುಕ್ತಿ ದೊರೆಯುತ್ತದೆ ಎಂದು ಕವಿಯ ಆಶಯ. ಉಪಮಾನವಾದ ಚಂದ್ರನಿಗಿಂತ ಉಪಮೇಯವಾದ ನಖಗಳಲ್ಲಿ ವಿಶೇಷವನ್ನು ಹೇಳಿರುವುದರಿಂದ ವ್ಯತಿರೇಕಾಲಂಕಾರ.

ಗಂಗಾಚ್ಛಲೇನ ತವ ನಿಃಸೃತಮೂರ್ಧ್ವಗಾಢ-
ಸಂಘಟ್ಟನಾತ್ ಪದನಖಾಗ್ರಮಯೂಖಲೇಶಮ್ ।
ಆಲೋಕ್ಯ ನೂನಮಮರಾಃ ಪತಿತಂ ಪಯೋಧಾ-
ವಾಮಥ್ಯ ತಂ ಜಗೃಹುರೀಶ ತದಿಂದುರೂಪಮ್ ॥ ೫೦ ॥

**ಅನುವಾದ :** ಜಗದೀಶ್ವರನೆ, ನಿನ್ನ ಕಾಲುಗುರಿನ ಒಂದು ಕಿರಣವು ಮೇಲಿನ

ಬ್ರಹ್ಮಾಂಡದ ಸಂಘರ್ಷಣೆಯಿಂದ ಕಳಚಿ ಸಮುದ್ರದಲ್ಲಿ ಬಿದ್ದದನ್ನು ನೋಡಿದ ದೇವತೆಗಳು, ಆ ಸಮುದ್ರವನ್ನು ಕಡೆದು ಚಂದ್ರನ ರೂಪದಲ್ಲಿ ಆ ಕಿರಣಕಾಂತಿಯನ್ನೇ ಸಂಗ್ರಹಿಸಿ ಪಡೆದುಕೊಂಡರು.

**ವಿವರಣೆ :** ಪರಮಾತ್ಮನು ತ್ರಿವಿಕ್ರಮಾವತಾರವನ್ನು ತಳೆದಾಗ ಅವನ ಒಂದು ಕಾಲು ಮೇಲಿನ ಬ್ರಹ್ಮಾಂಡಗಳನ್ನು ಸೋಕಿತು. ಆಗ ಆ ಕಾಲುಗುರು ಬ್ರಹ್ಮಾಂಡಕ್ಕೆ ಉಜ್ಜಿ ಅದರ ಸ್ವಲ್ಪ ಕಾಂತಿ ಕಳಚಿಬಿದ್ದು ಸಮುದ್ರವನ್ನು ಸೇರಿತು. ದೇವತೆಗಳು ಸಮುದ್ರಮಥನವನ್ನು ಮಾಡಿ ಆ ಕಾಂತಿಯನ್ನೇ ಚಂದ್ರನ ರೂಪದಿಂದ ಸಂಗ್ರಹಿಸಿಕೊಂಡರು ಎಂದು ಇಲ್ಲಿ ಕವಿ ಉತ್ಪ್ರೇಕ್ಷಿಸಿದ್ದಾನೆ. ಇದರಿಂದ ಪರಮಾತ್ಮನ ಪಾದನಖಗಳ ಕಾಂತಿಮಹಿಮೆ ವ್ಯಕ್ತವಾಗುತ್ತದೆ.

**ಯತ್ತೇ ಪದಾಂಬುರುಹಮಂಬುರುಹಾಸನೇಢ್ಯಂ**
**ಧನ್ಯಾಃ ಪ್ರಪದ್ಯ ಸಕೃದೀಶ ಭವಂತಿ ಮುಕ್ತಾಃ ।**
**ನಿತ್ಯಂ ತದೇವ ಭಜತಾಮತಿಮುಕ್ತಲಕ್ಷ್ಮೀ-**
**ರ್ಯುಕ್ತೈವ ದಿವ್ಯಮಣಿನೂಪುರಮೌಕ್ತಿಕಾನಾಮ್ ॥ ೫೦ ॥**

**ಅನುವಾದ :** ವರದರಾಜ, ಬ್ರಹ್ಮನಿಗೂ ಪೂಜ್ಯವಾದ ನಿನ್ನ ಪಾದಕಮಲವನ್ನು ಒಮ್ಮೆ ಆಶ್ರಯಿಸಿದ ಧನ್ಯರೂ ಕೂಡ ಮುಕ್ತರಾಗುತ್ತಾರೆ. ಹೀಗಿರುವಾಗ ಸದಾ ಆ ಪಾದಕಮಲವನ್ನೇ ಆಶ್ರಯಿಸಿದ ದಿವ್ಯಮಣಿನೂಪುರಗಳ ಮುತ್ತುಗಳಿಗೆ ಅತಿಮುಕ್ತಕಾಂತಿಯು ಬಂದಿರುವುದು ಯುಕ್ತವಾಗಿಯೇ ಇದೆ.

**ವಿವರಣೆ :** ಇಲ್ಲಿ ಕವಿಯು 'ಅತಿಮುಕ್ತ' ಎಂಬ ಪದದ ಶ್ಲೇಷವನ್ನು ಉಪಯೋಗಿಸಿ ಚಮತ್ಕಾರವನ್ನು ತಂದಿದ್ದಾನೆ. ಅತಿಮುಕ್ತ ಎಂದರೆ ಮುಕ್ತರಿಗಿಂತ ಅತಿಶಯವನ್ನುಳ್ಳದ್ದು ಎಂದು ಒಂದು ಅರ್ಥ. ವಾಸಂತೀ ಎಂದು ಇನ್ನೊಂದು ಅರ್ಥ. ಪರಮಾತ್ಮನ ಪಾದಗಳಲ್ಲಿರುವ ನೂಪುರಗಳಲ್ಲಿ ಶೋಭಿಸುವ ಮುತ್ತುಗಳು ವಾಸಂತೀಪುಷ್ಪದಂತೆ ಬೆಳ್ಳಗಿವೆ ಎಂದರೆ ಇನ್ನೊಂದು ಅರ್ಥದಲ್ಲಿ ಮುಕ್ತರಿಗಿಂತಲೂ ಹೆಚ್ಚಿನ ಕಾಂತಿಯನ್ನು ಹೊಂದಿವೆ ಎಂದಾಯಿತು. ಇದಕ್ಕೆ ಕವಿಯು ಒಂದು ಕಾರಣವನ್ನು ಕಲ್ಪಿಸಿ ಹೇಳಿದ್ದಾನೆ.

ಪರಮಾತ್ಮನ ಪಾದವನ್ನು ಒಮ್ಮೆ ಭಜಿಸಿದರೆ ಮುಕ್ತರಾಗುತ್ತಾರೆ ಧನ್ಯರು. ಸದಾ ಆ ಪಾದವನ್ನೇ ಆಶ್ರಯಿಸಿರುವ ನೂಪುರ ಮೌಕ್ತಿಕಗಳಿಗೆ ಅದಕ್ಕಿಂತ ಹೆಚ್ಚಿನ (ಅತಿಮುಕ್ತ) ಕಾಂತಿಯು ದೊರಕಿದ್ದರೆ ಅದು ಯೋಗ್ಯವೇ ಎಂದು ಇಲ್ಲಿ ಕಲ್ಪಿತವಾಗಿದೆ. ವಾಕ್ಯಾರ್ಥಹೇತುಕ ಕಾವ್ಯಲಿಂಗಾಲಂಕಾರ.

**ಪಾದಾನಮತ್ಸುರಶಿರೋಮಣಿಪದ್ಮರಾಗಾನ್**
**ಸದ್ಯಃ ಸ್ಫುರತ್ ಸಹಜರುಕ್‌ಪ್ರಕರಾನ್ ಕರಾಗ್ರೈಃ ।**
**ಮುಕ್ತಾಮಯಾನ್ ವಿದಧತಾಂ ಪ್ರಕಟಂ ಮುರಾರೇ**
**ಜೈವಾತೃಕತ್ವಮುಚಿತಂ ನನು ತೇ ನಖಾನಾಮ್ ॥ ೫೨ ॥**

**ಅನುವಾದ :** ಮುರನನ್ನು ಸಂಹರಿಸಿದ ವರದರಾಜ, ನಿನ್ನ ಪಾದಗಳಿಗೆ ನಮಸ್ಕರಿಸುವ ದೇವತೆಗಳ ತಲೆಗಳಲ್ಲಿ ಶೋಭಿಸುವ ಪದ್ಮರಾಗಮಣಿಗಳು ತಮಗೆ ಸಹಜವಾದ ಕೆಂಪುಕಾಂತಿಯಿಂದ ಹೊಳೆಯುತ್ತಿರುತ್ತವೆ. ಅವುಗಳನ್ನು ತಮ್ಮ ಕಿರಣಸಮೂಹದಿಂದ ಮುತ್ತುಗಳಂತೆ ಬಿಳುಪಾಗಿ ಮಾಡುವ ನಿನ್ನ ಕಾಲುಗುರುಗಳು ಚಂದ್ರನೆನಿಸುವುದು ಉಚಿತವಾಗಿದೆಯಲ್ಲವೇ ?

**ವಿವರಣೆ :** ''ಅಬ್ಜೋ ಜೈವಾತೃಕಃ ಸೋಮಃ'' ಎಂದು ಅಮರಕೋಶದಲ್ಲಿ ಹೇಳಿರುವುದರಿಂದ ಜೈವಾತೃಕ ಎಂದರೆ ಚಂದ್ರ. ಅವನು ಎಲ್ಲ ಪದಾರ್ಥಗಳನ್ನು ತನ್ನ ಬೆಳದಿಂಗಳಿನಿಂದ ಬೆಳ್ಳಗೆ ಮಾಡುತ್ತಾನೆ. ವರದರಾಜನ ನಖಗಳೂ ಕೂಡ ನಮಸ್ಕಾರ ಮಾಡುವ ದೇವತೆಗಳ ಕಿರೀಟಗಳಲ್ಲಿರುವ ಪದ್ಮರಾಗಗಳನ್ನು ಬಿಳುಪಾಗಿ ಮಾಡುತ್ತವೆ. ಆದ್ದರಿಂದ ನಖಗಳನ್ನು ಚಂದ್ರನೆಂದು ಕರೆಯುವುದು ಉಚಿತವಾಗಿದೆ. ಇಲ್ಲಿ 'ರುಕ್' ಎಂಬ ಶಬ್ದಕ್ಕೆ ಕಾಂತಿ ಎಂದರ್ಥ. ಆದರೆ ಆ ಶಬ್ದಕ್ಕೆ ರೋಗ ಎಂಬ ಅರ್ಥವೂ ಇದೆ. ಮುಕ್ತಾಮಯ ಎಂಬ ಪದವನ್ನು ಮುಕ್ತಾ+ಮಯ ಎಂದು ಬಿಡಿಸಿದರೆ ಮುತ್ತುಗಳಿಂದ ತುಂಬಿದ್ದು ಎಂದರ್ಥ. ಮುಕ್ತ + ಆಮಯ ಎಂದು ಬಿಡಿಸಿದರೆ ರೋಗರಹಿತ ಎಂದು ಅರ್ಥ. ಜೈವಾತೃಕ ಎಂಬ ಪದಕ್ಕೆ ಚಂದ್ರ ಎಂಬ ಅರ್ಥವಿರುವಂತೆ ವೈದ್ಯ ಎಂಬ ಅರ್ಥವೂ ಇದೆ. ಜೈವಾತೃಕಶ್ಚಂದ್ರಭಿಷಗಾಯುಷ್ಮತ್ಸು ಕೃಷೀವಲೇ – ಎಂದು ವೈಜಯಂತೀ ಕೋಶವು ಹೇಳುತ್ತದೆ. ಆದ್ದರಿಂದ ಈ ಪದ್ಯದಲ್ಲಿ ''ವರದರಾಜನ ಪಾದಗಳಿಗೆ

ನಮಸ್ಕರಿಸುವ ಸುರರ ಕಿರೀಟದ ಪದ್ಮರಾಗಮಣಿಗಳು ಸಹಜ ರೋಗವುಳ್ಳದ್ದಾಗಿದ್ದರೂ, ಅವನ್ನು ನಖಗಳು ತಮ್ಮ ಕರಗಳ (ಕಿರಣಗಳ) ತುದಿಯ ಸ್ಪರ್ಶದಿಂದಲೇ ರೋಗರಹಿತವನ್ನಾಗಿ ಮಾಡುವುದರಿಂದ ಅವಕ್ಕೆ ವೈದ್ಯತ್ವವು ಉಚಿತ'' ಎಂಬ ಅರ್ಥವೂ ಹೊಮ್ಮುತ್ತದೆ. ಶ್ಲೇಷಾಲಂಕಾರ.

ನಾಥ ತ್ವದಂಘ್ರಿನಖಧಾವನತೋಯಲಗ್ನಾ-
ಸ್ತತ್ಕಾಂತಿಲೇಶಕಣಿಕಾ ಜಲಧಿಂ ಪ್ರವಿಷ್ಟಾಃ ।
ತಾ ಏವ ತಸ್ಯ ಮಥನೇನ ಘನೀಭವಂತ್ಯೋ
ನೂನಂ ಸಮುದ್ರನವನೀತಪದಂ ಪ್ರಪನ್ನಾಃ ॥ ೫೩ ॥

**ಅನುವಾದ** : ಜಗನ್ನಾಥನೆ, ನಿನ್ನ ಕಾಲುಗುರುಗಳನ್ನು ತೊಳೆದ ನೀರಿಗೆ ಅಂಟಿಕೊಂಡ ನಖಕಾಂತಿಯ ತುಣುಕುಗಳು ಸಮುದ್ರವನ್ನು ಪ್ರವೇಶಿಸಿದುವು. ಸಮುದ್ರವನ್ನು ಕಡೆದಾಗ ಹೆಪ್ಪುಗಟ್ಟಿದ ಆ ತುಣುಕುಗಳೇ ಆಮೇಲೆ ಚಂದ್ರನ ರೂಪವನ್ನು ಪಡೆದವು.

**ವಿವರಣೆ** : ಭಗವಂತನ ಕಾಲನ್ನು ತೊಳೆದಾಗ ಅಲ್ಲಿಂದ ಹರಿದುಹೋದ ನೀರು ಸಮುದ್ರವನ್ನು ಸೇರಿತು. ಆ ನೀರಿನೊಡನೆ ಸ್ವಲ್ಪ ಭಗವಂತನ ನಖಗಳ ಕಾಂತಿಯೂ ಸಮುದ್ರಕ್ಕೆ ಸೇರಿತು. ಸಮುದ್ರ ಮಥನದ ವೇಳೆಯಲ್ಲಿ ಆ ಕಾಂತಿಯೇ ಚಂದ್ರನ ರೂಪದಲ್ಲಿ ಮೇಲೆ ತೇಲಿಬಂತು ಎಂದು ಇದರ ಅಭಿಪ್ರಾಯ. ಸಮುದ್ರದ ನವನೀತ (ಬೆಣ್ಣೆ) ಎಂದಿಲ್ಲಿ ಚಂದ್ರನನ್ನು ಕರೆದಿರುವುದು ಚಮತ್ಕಾರಕವಾಗಿದೆ. ಅಪ್ರಸ್ತುತವಾದ ಚಂದ್ರನ ವರ್ಣನೆಯಿಂದ ಪ್ರಸ್ತುತವಾದ ನಖಕಾಂತಿಯ ಪ್ರಶಂಸೆ ತೋರುವುದರಿಂದ ಅಪ್ರಸ್ತುತಪ್ರಶಂಸಾಲಂಕಾರ.

ಸವ್ಯಾಪಸವ್ಯಶರಮೋಕ್ಷಕೃತೀಕ್ಷುಧನ್ವಾ
ಜಂಘೇ ತವ ಸ್ವಶರಧೀ ಇತಿ ಸಂದಿಹಾನಃ ।
ಆಲೋಕತೇಽಂಘ್ರಿಕಟಕೋದ್ಗತ ರುಕ್‌ಛಲೇನ
ನ್ಯಸ್ಯಾಭಿತೋ ನಿಜಶರಾನನುರೂಪಭಾವಮ್ ॥ ೫೪ ॥

**ಅನುವಾದ** : ಮನ್ಮಥನು ಎಡಗೈಯಿಂದಲೂ ಬಲಗೈಯಿಂದಲೂ

ಬಾಣಗಳನ್ನು ಬಿಡುವುದರಲ್ಲಿ ನಿಪುಣ. ಅವನು ನಿನ್ನ ಎರಡು ಕಾಲುಗಳು ತನ್ನ ಎರಡು ಬತ್ತಳಿಕೆಗಳಿರಬಹುದೆಂದು ಸಂದೇಹಪಟ್ಟು, ಅವುಗಳ ಪಕ್ಕದಲ್ಲಿ ಕಾಲಿನ ಆಭರಣದಿಂದ ಹೊರಹೊಮ್ಮುವ ಕಾಂತಿಯ ನೆವದಿಂದ ತನ್ನ ಶರಗಳನ್ನಿಟ್ಟು ಅವುಗಳ ಅನುರೂಪತೆಯನ್ನು ನೋಡುತ್ತಾನೆ.

**ವಿವರಣೆ** : ಪರಮಾತ್ಮನ ಕಾಲುಗಳು ಮನ್ಮಥನ ಬತ್ತಳಿಕೆಗಳಂತೆ ಹೊಳೆಯುತ್ತವೆ. ಅವುಗಳಿಗೆ ತೊಡಿಸಿರುವ 'ಕಟಕ' ಎಂಬ ಆಭರಣಗಳ ಕಾಂತಿಪುಂಜಗಳು ಮನ್ಮಥನ ಬಾಣಗಳಂತೆ ಕಂಗೊಳಿಸುತ್ತವೆ. ಇದರಿಂದ ಕವಿಯು ಮನ್ಮಥನೇ ಉದ್ದೇಶಪೂರ್ವಕವಾಗಿ ತನ್ನ ಬಾಣಗಳನ್ನು ಭಗವಂತನ ಕಾಲುಗಳ ಪಕ್ಕದಲ್ಲಿಟ್ಟು ಅವುಗಳ ಆನುರೂಪ್ಯವನ್ನು ನೋಡಿ ಪರೀಕ್ಷಿಸುತ್ತಿರುವಂತಿದೆ. ಇವು ಕಾಲುಗಳೋ ಅಥವಾ ನನ್ನ ಬತ್ತಳಿಕೆಗಳೋ ಎಂದು ಅವನಿಗಿರುವ ಸಂದೇಹವೇ ಅದಕ್ಕೆ ಕಾರಣ - ಎಂದು ಉತ್ಪ್ರೇಕ್ಷಿಸಿದ್ದಾನೆ.

**ಜಾನುದ್ವಯಂ ತವ ಜಗತ್ತ್ರಯನಾಥ ಮನ್ಯೇ**
**ಮಾರಸ್ಯ ಕೇಲಿಮಣಿದರ್ಪಣತಾಮುಪೇತಮ್ ।**
**ಆಲೋಕಯನ್ ಯದವದಾತಮನೋಜ್ಞವೃತ್ತಂ**
**ರೂಪಂ ನಿಜಂ ಕಲಯತೇ ವಿಪರೀತಮೇಷಃ ॥ ೫೫ ॥**

**ಅನುವಾದ** : ಮೂರುಲೋಕಗಳ ಒಡೆಯ ವರದರಾಜನೆ, ನಿನ್ನ ಎರಡು ಮೊಣಕಾಲುಗಳು ಮನ್ಮಥನ ಆಟದ ಕನ್ನಡಿಗಳೆಂದು ಭಾವಿಸುತ್ತೇನೆ. ಏಕೆಂದರೆ ಬೆಳ್ಳಗೆ ಸುಂದರವಾಗಿ ಗುಂಡಾಗಿರುವ ಅವುಗಳನ್ನು ನೋಡಿದ ಈ ಮನ್ಮಥನು ತನ್ನ ರೂಪವನ್ನು ವ್ಯತ್ಯಸ್ತವಾಗಿ ತಿಳಿದುಕೊಳ್ಳುತ್ತಾನೆ.

**ವಿವರಣೆ** : ಕನ್ನಡಿಯಲ್ಲಿ ಮುಖನೋಡಿಕೊಂಡಾಗ ಎಡಗಡೆ ಇರುವುದು ಬಲಗಡೆ, ಬಲಗಡೆ ಇರುವುದು ಎಡಗಡೆ ಕಾಣಿಸುತ್ತದೆ. ಇದು ವಿಪರೀತ (ತಲೆಕೆಳಗು) ಎಂದು ಎಲ್ಲರ ಅನುಭವ. ಪರಮಾತ್ಮನ ವಿಗ್ರಹದ ಮೊಣಕಾಲುಗಳು ಗುಂಡಗಿದ್ದು ಹೊಳೆಯುವುದರಿಂದ ಅವನ್ನು ಮನ್ಮಥನ ಮಣಿದರ್ಪಣ (ರನ್ನಗನ್ನಡಿ) ಎಂದು ಉತ್ಪ್ರೇಕ್ಷಿಸಲಾಗಿದೆ. ಅವನ್ನು ನೋಡಿದ

ಮನ್ಮಥನಿಗೆ ತನ್ನ ರೂಪ ವಿಪರೀತವಾಗಿ ಕಾಣಿಸುವುದು ಸಹಜವಾಗಿದೆ. ಇದರ ತಾತ್ಪರ್ಯವೇನೆಂದರೆ ಪರಮಾತ್ಮನ ಮೊಣಕಾಲನ್ನು ನೋಡಿದಾಗ ಮನ್ಮಥನಿಗೆ 'ನಾನು ಕುರೂಪಿ' ಎಂಬ ಭಾವನೆ ಬಂದರೆ ಅದು ಸ್ವಾಭಾವಿಕವೇ ಎಂದಾಗುತ್ತದೆ. ಇದರಿಂದ ವರದರಾಜ ವಿಗ್ರಹದ ಸೌಂದರ್ಯಾತಿಶಯ ವನ್ನು ಹೇಳಿದಂತಾಯಿತು. ಉತ್ಪ್ರೇಕ್ಷಾ ಮತ್ತು ಕಾವ್ಯಲಿಂಗ ಅಲಂಕಾರಗಳು.

**ಊರೋಃ ಕಿಮನ್ಯದಯತಾಮುಪಮಾನಭಾವಂ**
**ವಾಮಸ್ಯ ದಕ್ಷಿಣಮಮುಷ್ಯ ಚ ತಂ ವಿಹಾಯ ।**
**ರಂಭಾದಯಃ ಸದೃಶ ಇತ್ಯುಚಿತಂ ಕಿಮೇತದ್**
**ಯಸ್ಯೋರ್ವಶೀ ಸುಭಗ ಸಾಪಿ ವಿಭೂತಿಲೇಶಃ ॥ ೫೬ ॥**

**ಅನುವಾದ :** ಸುಂದರ ವರದರಾಜ, ನಿನ್ನ ಎಡತೊಡೆಗೆ ಬಲತೊಡೆಯಲ್ಲದೆ ಬೇರೆ ಯಾವುದು ಉಪಮಾನವಾದೀತು ? ಆ ಬಲತೊಡೆಗೂ ಎಡತೊಡೆಯನ್ನು ಬಿಟ್ಟು ಬೇರೆ ಯಾವ ಉಪಮಾನವಿದೆ ? ರಂಭಾ (ಬಾಳೆಯ ದಿಂಡು) ಇತ್ಯಾದಿಗಳು ಆ ತೊಡೆಗಳಿಗೆ ಸಮಾನ ಎಂಬುದು ಉಚಿತವಾದೀತೆ ? ಏಕೆಂದರೆ ಆ ಊರ್ವಶಿಯೂ ಕೂಡ ಅವುಗಳ ಮಹಿಮೆಯ ಒಂದು ಕಣಮಾತ್ರವಲ್ಲವೆ ?

**ವಿವರಣೆ :** ರಂಭಾ ಎಂಬ ಪದಕ್ಕೆ ಬಾಳೆಯ ಗಿಡ ಮತ್ತು ಅಪ್ಸರೆಯರಲ್ಲಿ ರಂಭೆ ಎಂಬ ಹೆಸರಿನ ಒಬ್ಬಳು – ಹೀಗೆ ಎರಡು ಅರ್ಥಗಳು ಇರುವುದನ್ನು ಇಲ್ಲಿ ಗಮನಿಸಬೇಕು. ಊರ್ವಶೀ ಎಂಬ ಅಪ್ಸರೆಯು ನಾರಾಯಣನ ತೊಡೆಯಿಂದ ಹುಟ್ಟಿದಳು ಎಂಬ ಪುರಾಣಕಥೆಯನ್ನೂ ಗಮನಿಸಬೇಕು. ವರದರಾಜನ ತೊಡೆಗಳು ಪರಸ್ಪರ ಮಾತ್ರ ಹೋಲಿಸಲಿಕ್ಕೆ ಶಕ್ಯವೆಂದು ಹೇಳಿದುದರಿಂದ ಅವಕ್ಕೆ ಲೋಕದಲ್ಲಿ ಬೇರೆ ಯಾವ ಉಪಮಾನವೂ ಇಲ್ಲ ಎಂದು ಸೂಚಿತವಾಗುತ್ತದೆ. ಕವಿಗಳು ಸಾಧಾರಣವಾಗಿ ತೊಡೆಗಳಿಗೆ ಬಾಳೆಗಿಡದ ದಿಂಡನ್ನು ಉಪಮಾನವಾಗಿ ಕೊಡುತ್ತಾರೆ. ಆದರೆ ಅದು (ರಂಭಾ) ಸರಿಯಾದ ಉಪಮಾನವಾಗಲಾರದು. ಏಕೆಂದರೆ ಆ ರಂಭೆಗಿಂತ

ಸುಂದರಿಯಾದ ಊರ್ವಶಿಯು ಭಗವಂತನ ತೊಡೆಯಿಂದ ಉದ್ಭವಿಸಿದಳೆಂದು ಪುರಾಣಗಳು ಘೋಷಿಸುತ್ತವೆ.

ಪರಮಾತ್ಮನ ತೊಡೆಗಳಿಗೆ ಪರಸ್ಪರ ಉಪಮಾನೋಪಮೇಯ ಭಾವವನ್ನು ಹೇಳಿದ್ದರಿಂದ ಉಪಮೇಯೋಪಮಾಲಂಕಾರ. ಅವೆರಡಕ್ಕೆ ಸದೃಶವಾದುದು ಇನ್ನೊಂದಿಲ್ಲವೆಂದು ಅದರ ಫಲ.

**ನಾಥ ತ್ವಯಾ ಪರಿಹಿತಂ ವರವರ್ಣಿನೀನಾಂ**
**ರಾಗಸ್ಯ ಯದ್ವಸನಮಾಸ್ಪದತಾಂ ಬಿಭರ್ತಿ ।**
**ಸೌಂದರ್ಯಸಾರನಿಲಯೇನ ಕಟೀತಟೇನ**
**ತಸ್ಯೈಷ ಕಿಂ ನು ಮಹಿಮಾ ಪರಿಶೀಲನಸ್ಯ ॥ ೪೮ ॥**

**ಅನುವಾದ :** ಸ್ವಾಮಿ ವರದರಾಜ, ನೀನು ಧರಿಸಿರುವ ಪೀತಾಂಬರವು ವರವರ್ಣಿನಿಯರ (ಸುಂದರ ಸ್ತ್ರೀಯರ ಅಥವಾ ಅರಿಶಿನದ) ರಾಗದ (ಪ್ರೀತಿಯ ಅಥವಾ ಬಣ್ಣದ) ಆಸ್ಪದವಾಗಿರುವುದು. ಅದು ಯಾವಾಗಲೂ ಸೌಂದರ್ಯಸಾರಕ್ಕೆ ಆಶ್ರಯವಾದ ನಿನ್ನ ಸೊಂಟಕ್ಕೆ ಸುತ್ತಿರುವುದರಿಂದ ಉಂಟಾದ ಪರಿಚಯದ ಫಲವೇನು ?

**ವಿವರಣೆ :** ವರವರ್ಣಿನೀ ಎಂಬ ಶಬ್ದಕ್ಕೆ ಉತ್ತಮಸ್ತ್ರೀ ಮತ್ತು ಹರಿದ್ರಾ ಎಂಬ ಎರಡು ಅರ್ಥಗಳಿವೆ. 'ನಿಶಾಹ್ವಾ ಕಾಂಚನೀ ಪೀತಾ ಹರಿದ್ರಾ ವರವರ್ಣಿನೀ' ಎಂದು ಅಮರಕೋಶವು ಹೇಳುತ್ತದೆ. ರಾಗ ಶಬ್ದಕ್ಕೂ ಅನುರಾಗ, ಬಣ್ಣ ಎಂಬ ಅರ್ಥಗಳಿವೆ. ಅವುಗಳ ಶ್ಲೇಷದ ಆಧಾರದಿಂದ ಇಲ್ಲಿ ಕವಿ ಚಮತ್ಕಾರವನ್ನು ತಂದಿದ್ದಾನೆ.

**ಸುಪ್ರಾಪ್ಯ ಸಾರಸನಮಧ್ಯತಲೋದಯಾದ್ರಿಂ**
**ಮಧ್ಯಾಂಬರಂ ಮಸೃಣಯನ್ನರುಣೈರ್ಮಯೂಖೈಃ ।**
**ಸಂವೀಕ್ಷ್ಯತೇ ಸುಕೃತಿಭಿರ್ಮಣಿರೇಷ ಪೂಷಾ**
**ಸಂಸಾರರಾತ್ರ್ಯುಪರತಿಂ ಗತವದ್ಭಿರೇವ ॥ ೪೯ ॥**

**ಅನುವಾದ :** ವರದರಾಜ, ನಿನ್ನ ಒಡ್ಯಾಣವೆಂಬ ಉದಯಶೈಲವನ್ನೂ,

ನಡುವೆಂಬ ಆಕಾಶವನ್ನೂ ತನ್ನ ಕೆಂಪು ಕಿರಣಗಳಿಂದ ಸುಂದರ ಗೊಳಿಸುತ್ತಿರುವ ಈ ರತ್ನವೇ ಸೂರ್ಯ. ಸಂಸಾರವೆಂಬ ರಾತ್ರಿಯ ಕೊನೆಯನ್ನು ಸೇರಿದ ಪುಣ್ಯವಂತರೇ ಆ ಮಣಿಸೂರ್ಯನನ್ನು ಕಾಣುತ್ತಾರೆ.

**ವಿವರಣೆ** : ವರದರಾಜಸ್ವಾಮಿಯ ನಡುವಿಗೆ ತೊಡಿಸಿರುವ ಒಡ್ಯಾಣದ (ಡಾಬಿನ) ಮಧ್ಯದಲ್ಲಿ ಹೊಳೆಯುವ ರತ್ನವೇ ಸೂರ್ಯನೆಂದು ಇಲ್ಲಿ ರೂಪಿಸಲಾಗಿದೆ. ಆ ಸೂರ್ಯನಿಗೆ ಉದಯಾಚಲ ಸಾರಸನವೆಂದು ಇಲ್ಲಿ ಕರೆದಿರುವ ಆಭರಣ. ಪರಮಾತ್ಮನ ನಡು (ಮಧ್ಯ) ಆಕಾಶ. ರಾತ್ರಿ ಕಳೆದ ಮೇಲೆ ಸೂರ್ಯನ ದರ್ಶನವಾಗುವುದರಿಂದ, ಇಲ್ಲಿ ಜನನ-ಮರಣಗಳನ್ನುಳ್ಳ ಸಂಸಾರವನ್ನೇ ರಾತ್ರಿಯೆಂದು ಕವಿ ಕರೆದಿದ್ದಾನೆ. ಆ ರಾತ್ರಿಯನ್ನು ಕಳೆಯುವವರು ಸುಕೃತಿಗಳು ಮಾತ್ರ. ಅವರೇ ಆ ಮಣಿರೂಪನಾದ ಸೂರ್ಯನನ್ನು ಕಾಣುತ್ತಾರೆ. ರೂಪಕಾಲಂಕಾರ.

**ನಾಭೇರಭೂತ್ತವ ಚತುರ್ಭುಜ ನಾಂತರಿಕ್ಷಂ**
**ಯನ್ನಾಭಿರೇವ ಯದುನೇತರಿಯಂ ತತೋಽಭೂತ್ ।**
**ನಾಭ್ಯಾ ಇತಿ ಶ್ರುತಿವಿಪರ್ಯಯಗೇ ವಿಭಕ್ತೀ**
**ತಾಂ ಜೈಮಿನೇರನುಸಸಾರ ಪಶೋಶ್ಚ ಸೂತ್ರಮ್ ॥ ೫೯ ॥**

**ಅನುವಾದ :** ಚತುರ್ಭುಜ, ಯದುನಾಯಕ, ನಿನ್ನ ನಾಭಿಯಿಂದ ಅಂತರಿಕ್ಷ ಹುಟ್ಟಲಿಲ್ಲ. ಏಕೆಂದರೆ ನಿನ್ನ ನಾಭಿಯೇ ಆ ಅಂತರಿಕ್ಷದಿಂದ ಹುಟ್ಟಿದೆ. 'ನಾಭ್ಯಾ ಆಸೀದಂತರಿಕ್ಷಮ್' ಎಂಬ ಶ್ರುತಿವಾಕ್ಯದಲ್ಲಿರುವ ವಿಭಕ್ತಿಗಳು ವ್ಯತ್ಯಾಸಗೊಂಡಿವೆ. ಆ ಶ್ರುತಿಯನ್ನೇ ಜೈಮಿನಿಯ 'ಪಶೋಶ್ಚ' ಇತ್ಯಾದಿ ಸೂತ್ರವೂ ಅನುಸರಿಸಿದೆ.

**ವಿವರಣೆ** : ಪರಮಾತ್ಮನ ಮಧ್ಯಭಾಗವನ್ನು ಸೂಕ್ಷ್ಮತೆಯ ಕಾರಣದಿಂದ ಅಂತರಿಕ್ಷವೆಂದು ಕವಿಗಳು ಕರೆಯುತ್ತಾರೆ. ಆ ಮಧ್ಯಭಾಗದಲ್ಲಿ ನಾಭಿ (ಹೊಕ್ಕಳು) ಇರುವುದರಿಂದ ಅಂತರಿಕ್ಷದಿಂದ ನಾಭಿ ಹುಟ್ಟಿರುವುದೇ ಸರಿಯೆಂದು ಇಲ್ಲಿ ಕವಿ ಹೇಳಿದ್ದಾನೆ. ಪುರುಷಸೂಕ್ತದಲ್ಲಿ "ನಾಭ್ಯಾ

ಆಸೀದಂತರಿಕ್ಷಮ್'' ಎಂಬುದು ಇದಕ್ಕೆ ವಿರುದ್ಧವಾಗುತ್ತದೆ. ಆದರೆ ಆ ಶ್ರುತಿವಾಕ್ಯದಲ್ಲಿ ವಿಭಕ್ತಿಗಳನ್ನು ಬದಲಾಯಿಸಿಕೊಳ್ಳಬೇಕು. ಇದಕ್ಕೆ ಪ್ರಮಾಣವೇನೆಂದರೆ ಶ್ರುತಿವಾಕ್ಯಗಳ ಅರ್ಥವನ್ನು ನಿಶ್ಚಯಿಸಲು ಮೀಮಾಂಸಾಸೂತ್ರಗಳನ್ನು ರಚಿಸಿದ ಜೈಮಿನಿಯು 'ಪಶೋಶ್ಚ ವಿಪ್ರಕರ್ಷ ಸ್ತನ್ಮಧ್ಯೇ ವಿಧಾನಾತ್' ಎಂಬ ಸೂತ್ರವನ್ನು ಮಾಡಿರುವುದು. ಇದರಲ್ಲಿ ಮೀಮಾಂಸಕರು 'ಪಶೋಶ್ಚ ವಿಪ್ರಕರ್ಷಾತ್ ತನ್ಮಧ್ಯೇ ವಿಧಾನಮ್' ಎಂದು ವಿಭಕ್ತಿ ವಿಪರ್ಯಾಸವನ್ನು ಮಾಡಿ ಅರ್ಥವನ್ನು ಹೊಂದಿಸುತ್ತಾರೆ. ಹಾಗೆಯೇ ಮೇಲೆ ಉದಾಹರಿಸಿದ ಪುರುಷಸೂಕ್ತಮಂತ್ರದಲ್ಲೂ ಮಾಡಬೇಕು ಎಂದು ಕವಿಯ ಸೂಚನೆ. ವರದರಾಜನ ಸೊಂಟವು ಅತ್ಯಂತ ಸೂಕ್ಷ್ಮವಾಗಿ ಇರುವುದರಿಂದ ಅದು ಆಕಾಶವೆಂದು ಕವಿಸಮಯಾನುಸಾರವಾಗಿ ಗ್ರಹಿಸಲಾಗಿದೆ.

**ಆರೋಪಮಧ್ಯವಸಿತಿಂ ಚ ವಿನಾ ತವಾಸ್ಯಾಂ**
**ನಾಭೌ ಸರಃ ಪದಮುಪೈತು ಕಥಂ ನ ವೃತ್ತಿಮ್ ।**
**ಸಾಕ್ಷಾದಿಯಂ ಸರಸಿಜಸ್ಯ ಸಮುದ್ರಶಾಯಿನ್**
**ಉತ್ಪತ್ತಿಭೂರಿತಿ ಹಿ ನಾಯಕ ನಾಯಮೂಹಃ ॥ ೬೦ ॥**

**ಅನುವಾದ :** ಕಡಲಲ್ಲಿ ಮಲಗುವ ಜಗನ್ನಾಯಕ ವರದರಾಜ, ಆರೋಪ, ಅಧ್ಯವಸಾಯಗಳಿಲ್ಲದೆಯೇ ನಿನ್ನ ನಾಭಿಯಲ್ಲಿ 'ಸರಸ್' ಎಂಬ ಪದವು ವೃತ್ತಿಯನ್ನು ಹೇಗೆ ಪಡೆಯದೆ ಇದ್ದೀತು ? ಏಕೆಂದರೆ ಸರಸಿಜಕ್ಕೆ ಆ ನಾಭಿಯು ಉತ್ಪತ್ತಿಸ್ಥಾನವಾಗಿದೆಯೆಂಬುದು ಪ್ರತ್ಯಕ್ಷ, ಊಹೆಯಲ್ಲ.

**ವಿವರಣೆ :** ಅಲಂಕಾರಶಾಸ್ತ್ರದಲ್ಲಿ ಆರೋಪ, ಅಧ್ಯವಸಾಯ ಎಂಬ ಪದಗಳನ್ನು ಬಳಸುತ್ತಾರೆ. 'ಮುಖಂ ಚಂದ್ರಃ' (ಮುಖವೇ ಚಂದ್ರ) ಎಂಬಲ್ಲಿ ಉಪಮಾನ-ಉಪಮೇಯ ಇವುಗಳನ್ನು ಹೇಳಿ ಅವುಗಳಿಗೆ ತಾದ್ರೂಪ್ಯವನ್ನು ಹೇಳುವುದರಿಂದ ಆರೋಪ. 'ಚಂದ್ರಃ' ಎಂದು ಉಪಮಾನವಾಚಕವನ್ನು ಮಾತ್ರ ಹೇಳಿ ಅದರಿಂದಲೇ ಉಪಮೇಯವನ್ನು ಸಂಗ್ರಹಿಸಿ ಹೇಳಿದರೆ ಅದು

ಅಧ್ಯವಸಾಯ. ಬೇರೆ ಜನರ ನಾಭಿಗೆ 'ಸರಸ್' ಎಂಬ ಪದವನ್ನು ಅನ್ವಯಿಸಿ ಹೇಳಿದಾಗ ಆರೋಪ ಅಥವಾ ಅಧ್ಯವಸಾಯಗಳನ್ನು ಆಶ್ರಯಿಸದೆ ವಿಧಿಯಿಲ್ಲ. ಏಕೆಂದರೆ ಆ ನಾಭಿಯಲ್ಲಿ ಸರಸ್ಸಿ ಲಕ್ಷಣ ಇರುವುದಿಲ್ಲ. ಆದರೆ ಪರಮಾತ್ಮನ ನಾಭಿಯಲ್ಲಿ ಪದ್ಮವು ಹುಟ್ಟಿ ಅದರಲ್ಲಿ ಬ್ರಹ್ಮನು ಆವಿರ್ಭವಿಸಿದ ಕಾರಣ ಆ ನಾಭಿಗೆ 'ಸರಸ್ಸು' ಎಂಬ ಧರ್ಮವು ಸ್ವಾಭಾವಿಕವಾಗಿಯೇ ಉಂಟಾಗಿದೆ. ಅಲ್ಲಿ ಆರೋಪ ಅಥವಾ ಅಧ್ಯವಸಾಯ ಬೇಕಾಗಿಲ್ಲ- ಎಂದು ಕವಿ ಸೂಚಿಸಿದ್ದಾನೆ. ಇದರಿಂದ ವರದರಾಜಸ್ವಾಮಿಯ ನಾಭಿಯು ಸರಸ್ಸಿನಂತೆ ಸುಂದರವಾಗಿದೆ ಎಂದು ಹೇಳಿದಂತಾಗುತ್ತದೆ.

ಕಲ್ಪಾಂತರೇಷು ವಿತತಿಂ ಕಮಲಾಸನಾನಾಂ
ಭೂಯೋಽಪಿ ಕರ್ತುಮಿವ ಭೂರಿ ರಜೋ ದಧಾನಮ್ ।
ನಾಭಿಹ್ರದೇ ಸಮುದಿತಂ ನಲಿನಂ ತವೈತದ್
ಭೂಯಾತ್ ಸದೈವ ಮಮ ಭೂತಿಕರಂ ಮುರಾರೇ ॥ ೬೦ ॥

**ಅನುವಾದ :** ಎಲೈ ಮುರಾರಿ, ಮುಂದಿನ ಅನೇಕ ಕಲ್ಪಗಳಲ್ಲಿ ಹುಟ್ಟಬೇಕಾದ ಬ್ರಹ್ಮರ ಸಮೂಹವನ್ನು ಉತ್ಪಾದಿಸಲೋಸುಗವೋ ಎಂಬಂತೆ ಹೆಚ್ಚು ರಜಸ್ಸನ್ನು (ಪರಾಗಧೂಳಿಯನ್ನು) ಧರಿಸಿರುವ, ನಿನ್ನ ನಾಭಿಯೆಂಬ ಹ್ರದದಲ್ಲಿ ಹುಟ್ಟಿರುವ ಈ ಕಮಲವು ಸದಾ ನನಗೆ ಐಶ್ವರ್ಯವನ್ನು ತಂದುಕೊಡುವಂಥದ್ದಾಗಲಿ.

**ವಿಮರ್ಶೆ :** ಬ್ರಹ್ಮನು ಸೃಷ್ಟಿಕರ್ತನಾದ್ದರಿಂದ ರಜೋಗುಣಪ್ರಧಾನನು. ಅವನು ಹುಟ್ಟುವ ಸ್ಥಳ ಭಗವಾನ್ ವಿಷ್ಣುವಿನ ನಾಭಿಕಮಲ. ಒಂದೊಂದು ಕಲ್ಪಕ್ಕೂ ಒಬ್ಬೊಬ್ಬ ಬ್ರಹ್ಮನಿರುತ್ತಾನೆ. ಅನಂತಕಲ್ಪಗಳಲ್ಲಿ ಅನಂತ ಬ್ರಹ್ಮರನ್ನೂ ಉತ್ಪಾದಿಸಬೇಕಾಗುತ್ತದೆ. ಅಂಥ ಬ್ರಹ್ಮರ ಉತ್ಪತ್ತಿಗೆ ಬೇಕಾದ ರಜಸ್ಸನ್ನು (ರಜೋಗುಣವನ್ನು ಅಥವಾ ಪರಾಗವನ್ನು) ತುಂಬಿಕೊಂಡಿದೆ ಪರಮಾತ್ಮನ ನಾಭಿಕಮಲ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ. ಆ ನಾಭಿ ಕಮಲವು ಶ್ರೇಯಸ್ಸನ್ನುಂಟುಮಾಡಲಿ ಎಂದು ಕವಿ ಇಲ್ಲಿ ಪ್ರಾರ್ಥಿಸಿದ್ದಾನೆ. ಫಲೋತ್ಪ್ರೇಕ್ಷಾಲಂಕಾರ.

ಉಲ್ಲಾಸಯುತ್ಯುದರಬಂಧನಿಬದ್ಧದಿವ್ಯ-
ಶೋಣಾಶ್ಮರಶ್ಮಿಕಲಿಕಾವಲಿರಚ್ಯುತೈಷಾ ।
ಆಗಾಮ್ಯನೇಕಶತಕಲ್ಪವಿಧಾತೃಗರ್ಭ-
ನಾಭ್ಯುದ್ಗತಾಂಬುರುಹಕುಡ್ಮಲಪಂಕ್ತಿಶೋಭಾಮ್ ॥ ೬೨ ॥

**ಅನುವಾದ :** ಅಚ್ಯುತನೆನಿಸಿದ ವರದರಾಜ, ನಿನ್ನ ನಡುವಿನ ಪಟ್ಟಿಯಲ್ಲಿ ಖಚಿತವಾದ ಪದ್ಮರಾಗಮಣಿಗಳ ಕಾಂತಿಯ ಕುಡಿಗಳ ಈ ಸಮೂಹವು ಮುಂದೆ ಬರಲಿರುವ ಅನೇಕ ಶತಸಂಖ್ಯೆಯ ಕಲ್ಪಗಳ ಬ್ರಹ್ಮರನ್ನು ಗರ್ಭದಲ್ಲಡಗಿಸಿಕೊಂಡಿರುವ, ನಾಭಿಯಿಂದ ಹೊರಹೊಮ್ಮಿದ ಕಮಲದ ಮೊಗ್ಗೆಗಳ ಸಾಲಿನ ಸೊಬಗನ್ನು ತೋರಿಸುತ್ತಿದೆ.

**ವಿವರಣೆ :** ವರದರಾಜನ ನಡುವಿಗೆ ಕಟ್ಟಿರುವ ರತ್ನಮಯವಾದ ಪಟ್ಟಿಯಲ್ಲಿರುವ ಪದ್ಮರಾಗಮಣಿಗಳ ಕೆಂಪು ಕಿರಣಗಳು ಪದ್ಮದ ಮೊಗ್ಗೆಗಳಂತೆ ಕಾಣುತ್ತವೆ. ಅದರ ಆಧಾರದಿಂದ ಕವಿಯು ಇಲ್ಲಿ ಮುಂದಿನ ನೂರಾರು ಕಲ್ಪಗಳ ಬ್ರಹ್ಮರನ್ನು ತಮ್ಮ ಹೊಟ್ಟೆಯಲ್ಲಿ ಅಡಗಿಸಿಕೊಂಡಿರುವ ನಾಭಿಪದ್ಮಗಳ ಪಂಕ್ತಿಯಂತೆ ಈ ಕಿರಣಗಳು ಕಂಗೊಳಿಸುತ್ತವೆ ಎಂದು ವರ್ಣಿಸಿದ್ದಾನೆ.

ಊರ್ಧ್ವಂ ವಿರಿಂಚಿಭವನಾತ್ತವ ನಾಭಿಪದ್ಮಾದ್
ರೋಮಾವಲೀಪದಜುಷಸ್ತಮಸಃ ಪರಸ್ತಾತ್ ।
ಮುಕ್ತೌಘಮಂಡಿತಮುರಃಸ್ಥಲಮುನ್ನಮಯೂಖಂ
ಪಶ್ಯಾಮಿ ದೇವ ಪರಮಂ ಪದಮೇವ ಪಶ್ಚಾತ್ ॥ ೬೩ ॥

**ಅನುವಾದ :** ದೇವ ವರದರಾಜ, ಬ್ರಹ್ಮನ ಮನೆಯಾದ ನಿನ್ನ ನಾಭಿಪದ್ಮದ ಮೇಲೆ, ರೋಮಗಳ ಸಾಲಿನ ಸ್ಥಾನವನ್ನು ಪಡೆದಿರುವ ತಮಸ್ಸಿನ ಮೇಲೆ ಮುಕ್ತೌಘದಿಂದ (ಮುತ್ತುಗಳ ಅಥವಾ ಮುಕ್ತಜೀವರ ಸಮೂಹದಿಂದ)

ಅಲಂಕೃತವಾದ, ಕಿರಣಗಳನ್ನು ಪಸರಿಸುತ್ತಿರುವ ನಿನ್ನ ಎದೆಯು ಪರಮಪದವೆಂದು ನಾನು ಕಾಣುತ್ತಿದ್ದೇನೆ.

**ವಿವರಣೆ** : ಬ್ರಹ್ಮಲೋಕಕ್ಕಿಂತಲೂ ಮೇಲೆ, ತಮೋಲೋಕಗಳ ಆಚೆಗೆ ಪರಮಪದವೆಂಬ ಸ್ಥಾನವಿದೆ. ಮುಕ್ತಿಯನ್ನು ಪಡೆದ ಜೀವರು ಅಲ್ಲಿ ಸುಖದಿಂದ ಭಗವಂತನ ಸಾನ್ನಿಧ್ಯದಲ್ಲಿ ಆನಂದಾನುಭವವನ್ನು ಪಡೆಯುತ್ತಾರೆ. ಭಗವಂತನ ನಾಭಿಕಮಲವೇ ಬ್ರಹ್ಮಲೋಕ. ನಾಭಿಯ ಮೇಲುಭಾಗದಲ್ಲಿರುವ ರೋಮಾವಲಿ ತಮಸ್ಸು. ಅವುಗಳ ಮೇಲೆ ಮುತ್ತಿನ ಸರಗಳಿಂದ ಉಜ್ಜ್ವಲವಾದ ಪರಮಾತ್ಮನ ವಕ್ಷಃಸ್ಥಲವೇ ಪರಮಪದ ಎಂದು ಇಲ್ಲಿ ಕವಿ ವರ್ಣಿಸಿದ್ದಾನೆ. ಮುಕ್ತ ಶಬ್ದದ ಶ್ಲೇಷವನ್ನು ಬಳಸಿರುವುದು ಚಮತ್ಕಾರದ ಮೂಲವಾಗಿದೆ.

ಸಾಲೈರುದಂಶುಚಯರತ್ನಲಲಂ[illegible]ಖ್ಯೈಃ
ಸ್ಫೀತೋಲ್ಲಸತ್ಕುಸುಮಯಾ ವನಮಾಲಯಾ ಚ ।
ವಿಭ್ರಾಜತೇ ವಿಪುಲಮೇತದುರಸ್ತ್ವದೀಯ-
ಮಂತಃಪುರಂ ಜಲಧಿರಾಜಕುಮಾರಿಕಾಯಾಃ ॥ ೩೪ ॥

**ಅನುವಾದ** : ವರದರಾಜ, ನಿನ್ನ ವಿಶಾಲವಾದ ವಕ್ಷಃಸ್ಥಲವು ಸಮುದ್ರರಾಜನ ಮಗಳಾದ ಲಕ್ಷ್ಮಿಯ ಅಂತಃಪುರವಾಗಿ ಕಂಗೊಳಿಸುತ್ತಿದೆ. ಕಿರಣಗಳು ಹೊಮ್ಮುತ್ತಿರುವ 'ಲಲಂತಿಕಾ' ಎಂಬ ಹಾರಗಳೇ ಅದರ ಕೋಟೆ. ಅರಳಿದ ಹೂಗಳಿಂದ ತುಂಬಿರುವ ವನಮಾಲೆಯೇ (ಆ ಕೋಟೆಯ ಸುತ್ತಲೂ ಇರುವ) ವನಮಾಲೆ.

**ವಿವರಣೆ** : ಲಕ್ಷ್ಮಿಯು ವಿಷ್ಣುವಕ್ಷಃಸ್ಥಲವಾಸಿನಿ. ಆದ್ದರಿಂದ ವರದರಾಜನ ಎದೆಯೇ ಲಕ್ಷ್ಮಿಯ ಅಂತಃಪುರ. ಆ ಎದೆಯ ಮೇಲೆ ಹೊಳೆಯುತ್ತಿರುವ ರತ್ನಹಾರಗಳೇ ಆ ಅಂತಃಪುರದ ಸುತ್ತಲೂ ಕಟ್ಟಿರುವ ಕೋಟೆ. ಅಲ್ಲಿ ಶೋಭಿಸುತ್ತಿರುವ ಅನೇಕ ಹೂಗಳಿಂದ ರಚಿತವಾದ ವನಮಾಲೆಯೆಂಬ ಪುಷ್ಪಹಾರವೇ ಅಂತಃಪುರದ ಕೋಟೆಯ ಸುತ್ತಲೂ ಇರುವ ವನಮಾಲೆ (ಕಾಡಿನ ಮರಗಳ ಸಾಲು). ಇಲ್ಲಿ ಸಾವಯವ ರೂಪಕಾಲಂಕಾರ.

ಪ್ರಾಲಂಬಿಕಾಮುಪಗತಾಸ್ತವ ಪದ್ಮರಾಗಾಃ
ಪ್ರತ್ಯಗ್ರಘರ್ಮಕರಮಂಡಲನಿರ್ವಿಶೇಷಾಃ ।
ಪರ್ಯಂಕಕೇ ವರದ ವಕ್ಷಸಿ ಶಾಂತಿಲಕ್ಷ್ಮ್ಯಾಃ
ಕ್ರೀಡೋಪಬರ್ಹತಿಲಕಾ ಇವ ಪಾರ್ಶ್ವಭಾಜಃ ॥ ೬೫ ॥

**ಅನುವಾದ** : ಆಗ ತಾನೇ ಹುಟ್ಟುತ್ತಿರುವ ಸೂರ್ಯನ ಮಂಡಲಕ್ಕೆ ಸಮಾನವಾದ ಪದ್ಮರಾಗಮಣಿಗಳು ನಿನ್ನ ಕಂಠದಲ್ಲಿ ರಾಜಿಸುತ್ತಿರುವ ಪ್ರಾಲಂಬಿಕಾ ಎಂಬ ಸುವರ್ಣಹಾರದಲ್ಲಿ ಹೊಳೆಯುತ್ತಿವೆ. ವರದರಾಜ ಸ್ವಾಮಿ, ನಿನ್ನ ಎದೆಯಲ್ಲಿರುವ ಶಾಂತಿಲಕ್ಷ್ಮಿಯ ಪರ್ಯಂಕದ ಪಾರ್ಶ್ವದಲ್ಲಿ ಅಲಂಕಾರವಾಗಿಟ್ಟಿರುವ ದಿಂಬುಗಳಂತೆ ಆ ಪದ್ಮರಾಗಮಣಿಗಳು ಶೋಭಿಸುತ್ತಿವೆ.

**ವಿವರಣೆ** : ಶಾಂತಿಲಕ್ಷ್ಮಿಯು ವಿಶ್ರಾಂತಿ ಪಡೆಯಲು ಪರಮಾತ್ಮನ ಎದೆಯೆಂಬ ಪರ್ಯಂಕದಲ್ಲಿ ಕುಳಿತಿರುವಾಗ ಅಕ್ಕಪಕ್ಕದಲ್ಲಿಟ್ಟಿರುವ ಕೆಂಪುಬಣ್ಣದ ದಿಂಬು (ಲೋಡು)ಗಳಂತೆ ಪ್ರಾಲಂಬಿಕಾ ಎಂಬ ಹಾರದ ಪದ್ಮರಾಗಮಣಿಗಳು ಕಂಗೊಳಿಸುತ್ತಿವೆ ಎಂದು ಕವಿ ಇಲ್ಲಿ ವರ್ಣಿಸಿದ್ದಾನೆ. ಉಪಮಾಲಂಕಾರ. ''ಗ್ರೈವೇಯಕಂ ಕಂಠಭೂಷಾ ಲಂಬನಂ ಸ್ಯಾಲ್ಲಲಂತಿಕಾ । ಸ್ವರ್ಣೈಃ ಪ್ರಾಲಂಬಿಕಾ'' ಎಂಬ ಅಮರಕೋಶದ ಪ್ರಕಾರ ಕತ್ತಿನಲ್ಲಿ ತೂಗಾಡುವ ಸರಕ್ಕೆ ಲಲಂತಿಕಾ ಎಂದೂ ಚಿನ್ನದ ಮಣಿಗಳ ಸರಕ್ಕೆ ಪ್ರಾಲಂಬಿಕಾ ಎಂದೂ ಹೆಸರು.

ಅಸ್ತು ತ್ರಯೀಮಯತನುಸ್ತವ ಲಂಬನಾಲೀ-
ರತ್ನೈಸ್ತಿರಸ್ಕ್ರಿಯತ ಏವ ತಥಾಪಿ ಭಾನುಃ ।
ಸೋಢಃ ಸತಾಂ ಬತ ನಿಶಾಂತಮುಪಾಗತಾನಾ-
ಮೇವಂ ತಿರಸ್ಕೃತಿಕೃದೀಶ್ವರ ಕಃ ಸುವೃತ್ತೈಃ ॥ ೬೬ ॥

**ಅನುವಾದ** : ಸೂರ್ಯನು 'ತ್ರಯೀಮಯತನು' ಆಗಿದ್ದರೇನಂತೆ ? ಅವನನ್ನೂ ನಿನ್ನ ಹಾರಗಳ ರತ್ನಗಳು ತಿರಸ್ಕರಿಸುತ್ತವೆ. ನಿಶಾಂತದಲ್ಲಿ

ಆಗಮಿಸಿದ ಸತ್ಪುರುಷರನ್ನು (ನಕ್ಷತ್ರಗಳನ್ನು) ತಿರಸ್ಕರಿಸುವ ಯಾವನನ್ನು ತಾನೆ ಸುವೃತ್ತರು (ಒಳ್ಳೆಯ ಆಚಾರವನ್ನುಳ್ಳವರು ಅಥವಾ ಗುಂಡಾಗಿರುವ ಆಕಾರವನ್ನು ಉಳ್ಳವು) ಸಹಿಸುತ್ತಾರೆ ?

**ವಿವರಣೆ :** ಈ ಪದ್ಯದಲ್ಲಿ ನಿಶಾಂತ, ಸತ್, ತಿರಸ್ಕೃತಿ, ಸುವೃತ್ತ ಎಂಬ ಶಬ್ದಗಳ ಶ್ಲೇಷದಿಂದ ಚಮತ್ಕಾರವನ್ನು ಕವಿ ತಂದಿದ್ದಾನೆ. ನಿಶಾಂತ = ಬೆಳಗು, ಮನೆ. ಸತ್ = ನಕ್ಷತ್ರ, ಸಾಧುಜನ. ತಿರಸ್ಕೃತಿ = ತಿರಸ್ಕಾರ, ಮುಚ್ಚುವಿಕೆ. ಸುವೃತ್ತ = ಗುಂಡಾಗಿರುವ ವಸ್ತು, ಒಳ್ಳೆಯ ನಡತೆಯುಳ್ಳವನು.

ನಿಶಾಂತದಲ್ಲಿ (ರಾತ್ರಿಯ ಕೊನೆಯಲ್ಲಿ, ಬೆಳಗಾದಾಗ), ಸತಾಂ (ನಕ್ಷತ್ರಗಳ) ತಿರಸ್ಕೃತಿಯನ್ನು (ಎಂದರೆ ಕಾಂತಿಹೀನತೆಯಿಂದ ಮುಚ್ಚಿಹೋಗುವ ಸ್ಥಿತಿಯನ್ನು) ಸೂರ್ಯನು ಮಾಡುತ್ತಾನೆ. ಶ್ಲೇಷ ಮಹಿಮೆಯಿಂದ ಸೂರ್ಯನು ತನ್ನ ಮನೆಯಲ್ಲಿ ಸತ್ಪುರುಷರನ್ನು ತಿರಸ್ಕರಿಸಿದಂತೆ ಆಯಿತು. ಇಂಥ ತಿರಸ್ಕಾರವನ್ನು ಸುವೃತ್ತವಾಗಿರುವ (ಎಂದರೆ ಗುಂಡಾಗಿರುವ) ರತ್ನಗಳು ಹೇಗೆ ಸಹಿಸುತ್ತವೆ ? ಸುವೃತ್ತರು (ಒಳ್ಳೆಯ ನಡತೆಯುಳ್ಳ ಜನರು) ಮನೆಗೆ ಬಂದ ಅತಿಥಿಗಳನ್ನು ತಿರಸ್ಕರಿಸುವವನ ನಡವಳಿಕೆಯನ್ನು ಸಹಿಸುವರೇ ? ಎಂದಿಗೂ ಇಲ್ಲ. ಅಂಥವನನ್ನು ಅವರೂ ತಿರಸ್ಕರಿಸಬೇಕಲ್ಲವೆ ? ಈ ಕಾರಣದಿಂದಲೇ ವರದರಾಜಸ್ವಾಮಿಯ ಹಾರದ ರತ್ನಗಳು ಸೂರ್ಯನನ್ನು ತಿರಸ್ಕರಿಸುತ್ತಿವೆ ಎಂದು ಕವಿ ಹೇಳುತ್ತಾನೆ. ಭಗವಂತನ ಎದೆಯ ಮೇಲೆ ಹೊಳೆಯುವ ರತ್ನಗಳು ಸೂರ್ಯನಿಗಿಂತಲೂ ಹೆಚ್ಚು ದೇದೀಪ್ಯಮಾನವಾಗಿವೆ ಎಂದು ಅಭಿಪ್ರಾಯ. ಶ್ಲೇಷಮೂಲಕವಾದ ಅರ್ಥಾಂತರನ್ಯಾಸಾಲಂಕಾರ

**ನಷ್ಟೇಽಪಿ ಭಸ್ಮನಿ ವನೇ ಗಿರಿಶೇನ ದಗ್ಧಂ**
**ಸ್ತ್ರೀಣಾಂ ಹೃದೀಶ ಮದನಂ ಪ್ರತಿಬೋಧಯಂತಃ ।**
**ಭಸ್ಮೋಚ್ಚಯೇ ಕೃತಕಚಪ್ರತಿಬೋಧನಂ ತಂ**
**ಶುಕ್ರಂ ಜಯಂತು ನ ಕಥಂ ತವ ಹಾರತಾರಾಃ ॥ ೬೭ ॥**

**ಅನುವಾದ :** ವರದರಾಜ, ಪ್ರಕಾಶಮಾನವಾದ ನಿನ್ನ ಹಾರಗಳು ಶಿವನಿಂದ

ಸುಡಲ್ಪಟ್ಟ ಮನ್ಮಥನ ಭಸ್ಮವೆಲ್ಲಾ ನಷ್ಟವಾಗಿದ್ದರೂ ಆ ಮನ್ಮಥನನ್ನು ಸ್ತ್ರೀಯರ ಹೃದಯದಲ್ಲಿ ಮತ್ತೆ ಉಜ್ಜೀವಿಸುತ್ತವೆ. ಭಸ್ಮರಾಶಿಯಲ್ಲಿ ಮಾತ್ರ ಕಚನನ್ನು ಉಜ್ಜೀವಿಸಿದ ಶುಕ್ರನನ್ನು ಅವು ಹೇಗೆ ಜಯಿಸದೆ ಇದ್ದಾವು ?

**ವಿವರಣೆ :** ಶುಕ್ರಾಚಾರ್ಯನೆಂಬ ಅಸುರಗುರುವಿಗೆ ಸಂಜೀವಿನೀ ಮಂತ್ರ ತಿಳಿದಿತ್ತು. ಅವನ ಶಿಷ್ಯನಾದ ಕಚನನ್ನು ರಾಕ್ಷಸರು ಕೊಂದು ಸುಟ್ಟುಹಾಕಿದರೂ ಕೂಡ, ಆ ಭಸ್ಮದ ರಾಶಿಯಿಂದಲೇ ಕಚನನ್ನು ಶುಕ್ರಾಚಾರ್ಯನು ಬದುಕಿಸಿದನು. ಇದು ಅವನ ಮಹಿಮೆ. ವರದರಾಜನ ಕಂಠದ ಹಾರಗಳ ಮಹಿಮೆ ಇದಕ್ಕಿಂತಲೂ ಹೆಚ್ಚು. ಏಕೆಂದರೆ ಶಿವನು ಸುಟ್ಟುಹಾಕಿದ ಮನ್ಮಥನ ಭಸ್ಮ ಕೂಡ ಉಳಿದಿಲ್ಲದಿದ್ದರೂ ಆ ಮನ್ಮಥನನ್ನು ಸ್ತ್ರೀಯರ ಹೃದಯದಲ್ಲಿ ಮತ್ತೆ ಜೀವಿತಗೊಳಿಸಲು ಈ ಹಾರಗಳಿಗೆ ಸಾಮರ್ಥ್ಯವಿದೆ. ಆಕಾಶದಲ್ಲಿ ಪ್ರಕಾಶಿಸುವ ಶುಕ್ರಗ್ರಹಕ್ಕಿಂತಲೂ ವರದರಾಜನ ಎದೆಯಲ್ಲಿ ಹೊಳೆಯುವ ಹಾರದ ವಜ್ರಗಳು ಅಧಿಕ ಕಾಂತಿಯಿಂದ ಕೂಡಿವೆ ಎಂದು ಇಲ್ಲಿ ಸೂಚ್ಯಾರ್ಥ.

ಉತ್ಪ್ರೇಕ್ಷಯತ್ಯಧಿಭುಜಾಂತರಮುಲ್ಲಸಂತೀ
ಪಾರ್ಶ್ವದ್ವಯೇ ಪರಮಪೂರುಷ ಹಾರಮಾಲಾ ।
ತತ್ರತ್ಯಕಾಂತಿಸರಿತಸ್ತರಲೈಃ ಪ್ರಣುನ್ನಾಮ್
ಊರ್ಮ್ಯುತ್ಕರೈರುಭಯತಃ ಸಿತಫೇನಪಂಕ್ತಿಮ್ ॥ ೬೮ ॥

**ಅನುವಾದ :** ಎಲೈ ಪರಮಪುರುಷ, ನಿನ್ನ ಭುಜಗಳ ಮಧ್ಯದಲ್ಲಿ ಎರಡು ಪಕ್ಕಗಳಲ್ಲೂ ಶೋಭಿಸುವ ಹಾರವು ಅಲ್ಲಿರುವ ಕಾಂತಿಯೆಂಬ ನದಿಯ ಚಂಚಲತರಂಗಗಳಿಂದ ಎರಡು ಕಡೆಯೂ ಉಂಟಾಗಿರುವ ಬಿಳುಪಾದ ನೊರೆಯ ಸಾಲನ್ನು ನೆನಪಿಗೆ ತರುತ್ತದೆ.

**ವಿವರಣೆ :** ಬಿಳುಪಾದ ಮುತ್ತಿನ ಹಾರಗಳನ್ನು ವರದರಾಜನು ಧರಿಸಿರುವ ಕಾರಣ, ಎದೆಯಲ್ಲಿ ಹರಿಯುವ ಕಾಂತಿಯ ನದಿಯು ಎರಡು ಕಡೆಯೂ ಉಕ್ಕಿಸಿರುವ ನೊರೆಯಂತೆ ಆ ಹಾರಗಳು ಕಾಣುತ್ತವೆ ಎಂದು ಇಲ್ಲಿ ಕವಿಯ ಅಭಿಪ್ರಾಯ. ಸ್ಮರಣಾಲಂಕಾರ.

ತ್ವಾಂ ಸರ್ವಭೂತಮಯಮಾಶ್ರಿತಸರ್ವವರ್ಣಂ
ಯದ್ ವೈಜಯಂತ್ಯುಪಗತಾಚ್ಯುತ ಸರ್ವಗಂಧಮ್ ।
ತೇನೈವ ಕಿಂ ತ್ರಿಭುವನೈಕಮಹಾವದಾನ್ಯ
ಸಾರೂಪ್ಯಮಾವಹತಿ ತೇ ಸಕಲಾಭಿವಂದ್ಯಮ್ ॥ ೬೯ ॥

**ಅನುವಾದ :** ಅಚ್ಯುತ, ಸರ್ವಭೂತಮಯನೂ, ಸರ್ವವರ್ಣಗಳಿಗೆ ಆಶ್ರಯನೂ ಸರ್ವಗಂಧನೂ ಆದ ನಿನ್ನನ್ನು ವೈಜಯಂತೀಮಾಲೆಯು ಆಶ್ರಯಿಸಿದೆ. ಮೂರು ಭುವನಗಳಿಗೂ ಮುಖ್ಯ ದಾತೃವಾದ ವರದರಾಜ, ಈ ಕಾರಣದಿಂದಲೇ ಆ ಮಾಲೆಯು ಸಕಲನಮಸ್ಕಾರ್ಯವಾದ ನಿನ್ನ ಸಾರೂಪ್ಯವನ್ನು ಪಡೆದಿದೆಯೇನು ?

**ವಿವರಣೆ :** ಅಂತರಾತ್ಮಸ್ವರೂಪದಿಂದ ಎಲ್ಲ ಪ್ರಾಣಿಗಳ ಹೃದಯದಲ್ಲಿ ವಾಸ ಮಾಡುವುದರಿಂದ ಪರಮಾತ್ಮನು ಸರ್ವಭೂತಮಯ. ವಿಪ್ರ - ಕ್ಷತ್ರಿಯ - ವೈಶ್ಯ -ಶೂದ್ರರೆಂಬ ಎಲ್ಲ ವರ್ಣಗಳಿಗೂ ಅವನು ಆಶ್ರಯ. ಸರ್ವಗಂಧಗಳಿಗೆ ಅವನೇ ಮನೆ ಎಂದು 'ಸರ್ವಕರ್ಮಾ ಸರ್ವಕಾಮಃ ಸರ್ವಗಂಧಃ ಸರ್ವರಸಃ' ಎಂಬ ಶ್ರುತಿ ಹೇಳುತ್ತದೆ. ಅಂಥ ಪರಮಾತ್ಮನನ್ನು ಅಲಂಕರಿಸುವ ವೈಜಯಂತೀಮಾಲೆಗೂ ಈ ಎಲ್ಲ ಗುಣಗಳೂ ಬಂದಿವೆ. ಅದೂ ಸರ್ವಭೂತಮಯೀ ಎಂದು ಪುರಾಣಗಳು ಹೇಳುತ್ತವೆ. ''ಪಂಚರೂಪಾ ತು ಯಾ ಮಾಲಾ ವೈಜಯಂತೀ ಗದಾಭೃತಃ । ಸಾ ಭೂತಹೇತುಸಂಘಾತಭೂತಾ ಮಾಲಾ ಚ ವೈ ದ್ವಿಜ ॥'' ಹಾಗೆಯೇ ಅದು ಸರ್ವವರ್ಣಾತ್ಮಕವಾಗಿದೆ, ಎಂದರೆ ಎಲ್ಲ ಬಣ್ಣಗಳ ಹೂಗಳನ್ನು ಹೊಂದಿದೆ. ಎಲ್ಲ ಸುಗಂಧವೂ ಅದರಲ್ಲಿದೆ. ಈ ಎಲ್ಲ ಗುಣಗಳನ್ನು ಹೊಂದಿರಲು ಕಾರಣವು ಏನೆಂದರೆ ಅದೇ ಗುಣಗಳನ್ನು ಹೊಂದಿರುವ ಪರಮಾತ್ಮನನ್ನು ವೈಜಯಂತೀಮಾಲೆಯು ಆಶ್ರಯಿಸಿರುವುದೇ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ತಾರಾಭಿರಾಮಪರಿಣಾಹಲಸತ್‌ಸಿತಾಭ್ರಂ
ತಾಪಿಚ್ಛಮೇಚಕಮುರಃ ಶರದಂತರಿಕ್ಷಮ್ ।
ಪ್ರಾಪ್ಯೈವ ದೇವ ತವ ಕೌಸ್ತುಭಪೂರ್ಣಚಂದ್ರಃ
ಪೂರ್ಣಾಂ ಬಿಭರ್ತಿ ಪುರುಷೋತ್ತಮ ಕಾಂತಿರೇಖಾಮ್ ॥ ೭೦ ॥

**ಅನುವಾದ** : ದೇವ, ಕೌಸ್ತುಭಮಣಿಯೆಂಬ ಪೂರ್ಣಚಂದ್ರನು ನಿನ್ನ ಎದೆಯೆಂಬ ಶರತ್ಕಾಲಾಂತರಿಕ್ಷವನ್ನು ಆಶ್ರಯಿಸಿರುವುದರಿಂದಲೇ ಪೂರ್ಣ ಕಾಂತ್ಯತಿಶಯವನ್ನು ಹೊಂದಿದ್ದಾನೆ. ನಿನ್ನ ಎದೆಯು ತಾರಗಳಿಂದ (ಶುದ್ಧ ಮುಕ್ತಾಫಲಗಳಿಂದ) ಸುಂದರವಾದ ವಿಶಾಲತೆಯಲ್ಲಿ ಹೊಳೆಯುವ ಸಿತಾಭ್ರವನ್ನು (ಕರ್ಪೂರಲೇಪವನ್ನು) ಹೊಂದಿದೆ. ಶರದಂತರಿಕ್ಷವು ತಾರೆಗಳಿಂದ (ನಕ್ಷತ್ರಗಳಿಂದ) ಸುಂದರವಾದ ವಿಶಾಲತೆಯಲ್ಲಿ ಸಿತಾಭ್ರಗಳನ್ನು (ಬಿಳುಪಾದ ಮೋಡಗಳನ್ನು) ಹೊಂದಿದೆ. ಎರಡೂ ತಾಪಿಚ್ಛಮೇಚಕವಾಗಿವೆ. (ಹೊಂಗೆಯ ಮರದಂತೆ ಕಪ್ಪಾಗಿವೆ).

**ವಿವರಣೆ** : ಶರತ್ಕಾಲದ ಅಂತರಿಕ್ಷವನ್ನು ಆಶ್ರಯಿಸಿದಾಗಲೇ ಚಂದ್ರನು ಪೂರ್ಣಕಾಂತಿಯ ಅತಿಶಯವನ್ನು ಪಡೆಯುತ್ತಾನೆ. ಹಾಗೆಯೇ ಕೌಸ್ತುಭ ಮಣಿಯೆಂಬ ಚಂದ್ರನು ಪುರುಷೋತ್ತಮನಾದ ವರದರಾಜನ ಎದೆಯನ್ನು ಆಶ್ರಯಿಸಿದಾಗಲೇ ಕಾಂತ್ಯತಿಶಯವನ್ನು ಪಡೆಯುತ್ತಾನೆ. ಪರಮಾತ್ಮನ ವಕ್ಷಃಸ್ಥಲಕ್ಕೂ ಶರದಂತರಿಕ್ಷಕ್ಕೂ ಅಭೇದವನ್ನು ಶ್ಲೇಷದ ಆಧಾರದಿಂದ ಇಲ್ಲಿ ಸಾಧಿಸಲಾಗಿದೆ. ತಾರಾಭಿರಾಮ = ಮುತ್ತುಗಳಿಂದ ಸುಂದರ ಅಥವಾ ನಕ್ಷತ್ರಗಳಿಂದ ಸುಂದರ. ಸಿತಾಭ್ರ = ಕರ್ಪೂರ ಅಥವಾ ಬಿಳಿಮೋಡ. ಶ್ಲೇಷದ ಆಧಾರದಿಂದ ಎರಡಕ್ಕೂ ಅಭೇದವನ್ನು ಹೇಳಲಾಗಿದೆ. ರೂಪಕಾಲಂಕಾರ.

ನಾಭೀಸರೋಜಕಿರಣೈರ್ಮಣಿರಾಜಭಾಭಿ-
ರಾತ್ಮಪ್ರಭಾಭಿರಪಿ ಸಂವಲಿತಂ ವಿಭಾತಿ ।
ಶ್ರೀವತ್ಸವಿಗ್ರಹವಪುಷಃ ಪ್ರಕೃತೇಸ್ತ್ವದೀಯಂ
ವಕ್ಷಃ ಪರೀತಮಿವ ಸತ್ತ್ವರಜಸ್ತಮೋಭಿಃ ॥ ೭೧ ॥

**ಅನುವಾದ** : ವರದರಾಜ, ನಿನ್ನ ಎದೆಯು ನಾಭಿಕಮಲದ

ಕಿರಣಗಳಿಂದಲೂ, ಕೌಸ್ತುಭಮಣಿಯ ಹೊಳಪಿನಿಂದಲೂ, ಶರೀರದ ಕಾಂತಿಯಿಂದಲೂ ಕೂಡಿ ಶ್ರೀವತ್ಸವಿಗ್ರಹವನ್ನು ಧರಿಸಿರುವ ನಿನ್ನ ಪ್ರಕೃತಿಯ ಸತ್ತ್ವ ರಜಸ್, ತಮಸ್ ಎಂಬ ಮೂರು ಗುಣಗಳಿಂದ ಸುತ್ತುವರಿಯಲ್ಪಟ್ಟಿರುವಂತೆ ಹೊಳೆಯುತ್ತಿದೆ.

**ವಿವರಣೆ** : ಪ್ರಕೃತಿಯ ಮೂರು ಗುಣಗಳಾದ ಸತ್ತ್ವ-ರಜಸ್-ತಮಸ್ ಎಂಬವುಗಳಿಗೆ ಕ್ರಮವಾಗಿ ಬಿಳುಪು, ಕೆಂಪು, ಕಪ್ಪು ಬಣ್ಣಗಳನ್ನು ಶಾಸ್ತ್ರ ಹೇಳುತ್ತದೆ. ಪರಮಾತ್ಮನ ನಾಭಿಕಮಲವು ಬೆಳ್ಳಗಿದ್ದು ಅದರ ಕಾಂತಿ ಸತ್ತ್ವಗುಣವನ್ನೂ, ಕೌಸ್ತುಭಮಣಿ ಕೆಂಪಾಗಿದ್ದು ಅದರ ಕಾಂತಿ ರಜೋಗುಣವನ್ನೂ, ಶರೀರದ ಕಾಂತಿಯು ನೀಲವಾಗಿದ್ದು ಅದು ತಮೋಗುಣವನ್ನೂ ಪ್ರತಿಬಿಂಬಿಸುವುದರಿಂದ ಪರಮಾತ್ಮನ ಎದೆಯು ಗುಣತ್ರಯದಿಂದ ಆವೃತವಾಗಿದ್ದಂತಿದೆ ಎಂದು ಇಲ್ಲಿ ಉತ್ಪ್ರೇಕ್ಷಿಸಲಾಗಿದೆ.

**ವಕ್ಷಃಸ್ಥಲಂ ವರದ ನಂದನಮಾಶ್ರಿತಸ್ತೇ**
**ಯೇಷಾಂ ವಿಭಾತಿ ಹರಿಚಂದನ ಏಷ ಮಧ್ಯೇ ।**
**ಏತೇ ಚತುರ್ಭುಜ ಭುಜಾಸ್ತವ ತಸ್ಯ ಶಾಖಾಃ ।**
**ಶಂಕೇ ಕರಾಬ್ಜದಲಕೋಮಲಿತಾಗ್ರಭಾಗಾಃ ॥ ೭೨ ॥**

**ಅನುವಾದ** : ವರದರಾಜ, ಚತುರ್ಭುಜ, ನಿನ್ನ ವಕ್ಷಃಸ್ಥಳವೆಂಬ ನಂದನವನವನ್ನು ಈ ಹರಿಚಂದನವು ಆಶ್ರಯಿಸಿದೆ. ನಿನ್ನ ನಾಲ್ಕು ಭುಜಗಳು ಅದರ ಕೊಂಬೆಗಳು, ಅವುಗಳ ತುದಿಗಳು ಕೈಗಳೆಂಬ ಕಮಲಗಳಿಂದ ಕೋಮಲವಾಗಿವೆ ಎಂದು ಭಾವಿಸುತ್ತೇನೆ.

**ವಿವರಣೆ** : ನಂದನ ಎಂಬ ಪದಕ್ಕೆ ಆನಂದವನ್ನು ಕೊಡುವ ವಸ್ತು ಎಂದೂ ಇಂದ್ರನ ನಂದನವನ ಎಂದೂ ಅರ್ಥವಾಗುತ್ತದೆ. ಹರಿಚಂದನ ಎಂಬ ಪದಕ್ಕೆ ಪರಮಾತ್ಮನು ಎದೆಗೆ ಬಳಿದುಕೊಂಡಿರುವ ಶ್ರೀಗಂಧವೆಂದೂ, ಹರಿಚಂದನ ಎಂಬ ದೇವವೃಕ್ಷವೆಂದೂ ಅರ್ಥ. ಈ ಶ್ಲೇಷವನ್ನು ಬಳಸಿಕೊಂಡು ಕವಿ ಪರಮಾತ್ಮನ ನಾಲ್ಕು ಭುಜಗಳೇ ಆ ಹರಿಚಂದನವೆಂಬ ದೇವ ವೃಕ್ಷದ ಶಾಖೆಗಳೆಂದು ಉತ್ಪ್ರೇಕ್ಷಿಸಿದ್ದಾನೆ.

ಜಾತ್ಯೈವ ಯದ್ವರದ ಪಲ್ಲವರಾಗ ಏಷಃ
ಯಲ್ಲಾಲ್ಯತೇ ಚ ಭವತಾ ಕಟಕೇ ನಿವೇಶ್ಯ ।
ಮನ್ಯೇ ಮಣಿಸ್ತದುಪಗಮ್ಯ ಮದಾಂಧಭಾವಂ
ಸಾಕ್ಷಾದಯಂ ಸವಿತುರೇವ ಕರೋತ್ಯವಜ್ಞಾಮ್ ॥ ೬೩ ॥

**ಅನುವಾದ :** ವರದರಾಜ, ಈ ಮಣಿಯು ಜನ್ಮದಿಂದಲೇ ಪಲ್ಲವಗಳ (ಚಿಗುರುಗಳ) ಕೆಂಪುಬಣ್ಣವನ್ನು ಹೊಂದಿದೆ. ನೀನು ಅದನ್ನು ನಿನ್ನ ಬಳೆಯಲ್ಲಿ ಧರಿಸಿ ಪ್ರೀತಿಯಿಂದ ನೋಡುತ್ತಿರುವೆ. ಇದರಿಂದ ಗರ್ವವನ್ನು ಪಡೆದು ಆ ಮಣಿಯು ಈಗ ಸವಿತೃವಿಗೆ (ಸೂರ್ಯನಿಗೆ ಅಥವಾ ಜನ್ಮಕೊಟ್ಟ ತಂದೆಗೆ) ಕೂಡ ತಿರಸ್ಕಾರವನ್ನು ತೋರುತ್ತಿದೆ.

**ವಿವರಣೆ :** ಪರಮಾತ್ಮನ ಹಸ್ತಾಭರಣದಲ್ಲಿರುವ ರತ್ನವು ಸೂರ್ಯನಿಗಿಂತ ಹೆಚ್ಚು ಪ್ರಕಾಶಮಾನವಾಗಿರುವುದರಿಂದ ಕವಿ ಹೀಗೆ ಉತ್ಪ್ರೇಕ್ಷಿಸಿದ್ದಾನೆ. ಪಲ್ಲವ (ಚಿಗುರು, ವಿಟ), ರಾಗ (ಕೆಂಪು, ಅನುರಾಗ), ಕಟಕ (ಬಳೆ, ಸೈನ್ಯ), ಸವಿತೃ (ಸೂರ್ಯ, ತಂದೆ) ಎಂಬ ಪದಗಳ ಶ್ಲೇಷವನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಸೈನ್ಯದಲ್ಲಿ ಹೆಚ್ಚಿನ ಅಧಿಕಾರವನ್ನು ರಾಜನು ಕೊಟ್ಟಾಗ ಅದನ್ನು ಉಪಯೋಗಿಸಿಕೊಂಡು ಮದಾಂಧನಾದವನು ತನ್ನ ತಂದೆಯನ್ನು ತಿರಸ್ಕರಿಸಿ ಮೆರೆಯುತ್ತಾನೆ ಎಂಬ ಅರ್ಥವೂ ಇಲ್ಲಿ ಸೂಚಿತವಾಗುತ್ತದೆ.

ಐಂದ್ರೋಪಲಪ್ರಭಮಧೋ ಭುಜದಂಡನಾಲ-
ಮೇಕತ್ರ ಚಕ್ರಮಪರತ್ರ ಚ ಶಂಖಹಂಸಮ್ ।
ದೃಷ್ಟ್ವಾ ಕಥಂ ನ ಕಲಯೇಮಹಿ ಕಾಂತಿಸಿಂಧೋ-
ರುತ್ಫುಲ್ಲ ಪದ್ಮಯುಗಮೂರ್ಧ್ವಕರದ್ವಯಂ ತೇ ॥ ೬೪ ॥

**ಅನುವಾದ :** ಕೆಳಭಾಗದಲ್ಲಿ ಇಂದ್ರನೀಲಮಣಿಯ ಕಾಂತಿಯನ್ನು ಹೊಂದಿರುವ ನಿನ್ನ ಭುಜಗಳನ್ನುಳ್ಳ ಮೇಲಿನ ಎರಡು ಕೈಗಳಲ್ಲಿ, ಒಂದರಲ್ಲಿ ಚಕ್ರವೂ, ಇನ್ನೊಂದರಲ್ಲಿ ಶಂಖವೆಂಬ ಹಂಸವೂ ಇರುವುದನ್ನು

ನೋಡಿದಾಗ, ಆ ಎರಡು ಕೈಗಳು ಕಾಂತಿಸಮುದ್ರದಲ್ಲಿ ಹುಟ್ಟಿದ ಎರಡು ಪದ್ಮಗಳೆಂದು ನಾವು ತಿಳಿಯದೆ ಇರಲು ಹೇಗೆ ಸಾಧ್ಯ ?

**ವಿವರಣೆ :** ಪರಮಾತ್ಮನ ಬಾಹುದಂಡವು ಇಂದ್ರನೀಲಮಣಿಯ ಪ್ರಭೆಯನ್ನು ಹೊಂದಿದ್ದು ಪದ್ಮನಾಳದಂತಿದೆ. ಆ ಭುಜಗಳ ತುದಿಯಲ್ಲಿರುವ ಒಂದು ಕೈಯಲ್ಲಿ ಚಕ್ರವಿದೆ. ಚಕ್ರ ಶಬ್ದಕ್ಕೆ ಚಕ್ರವಾಕಪಕ್ಷಿ ಎಂಬ ಅರ್ಥವೂ ಇರುವುದರಿಂದ ಕೈಯಲ್ಲಿ ಅಂಥ ಪಕ್ಷಿ ಕುಳಿತಿರುವುದೆಂದು ಸಿದ್ಧವಾಯಿತು. ಇನ್ನೊಂದು ಕೈಯಲ್ಲಿ ಶಂಖವಿದೆ. ಶಂಖವೂ ಬಿಳಿ, ಹಂಸವೂ ಬಿಳಿ. ಇದರಿಂದ ಶಂಖವೇ ಹಂಸವೆಂಬ ರೂಪಕವು ಸಿದ್ಧವಾಯಿತು. ಪದ್ಮಗಳಲ್ಲಿ ಈ ಪಕ್ಷಿಗಳು ಕುಳಿತಿರುತ್ತವೆ ಎಂಬ ಪ್ರಸಿದ್ಧಿಯಿರುವುದರಿಂದ ಇದರ ಆಧಾರದಿಂದ ಭಕ್ತರು ಪರಮಾತ್ಮನ ಕೈಗಳು ಕಾಂತಿಸಮುದ್ರದಿಂದ ಉದಿಸಿರುವ ಎರಡು ಪದ್ಮಗಳೆಂದು ಭಾವಿಸಿದರೆ ಏನೂ ತಪ್ಪಿಲ್ಲವೆಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

**ಚಂದ್ರಾರ್ಕಚಾರುತರಶಂಖರಥಾಂಗಶೋಭಾ-**
**ಸಂಭಾವ್ಯರಾತ್ರಿದಿವಸಾತ್ಮಕಪಾರ್ಶ್ವಯುಗ್ಮಮ್ ।**
**ನಕ್ಷತ್ರದೃಶ್ಯನವಮೌಕ್ತಿಕಹಾರಿರೂಪಂ**
**ಮನ್ಯೇ ಮಹಾಪುರುಷರೂಪಧರಂ ಭವಂತಮ್ ॥ ೭೫ ॥**

**ಅನುವಾದ :** ವರದರಾಜ, ಚಂದ್ರಸೂರ್ಯರಂತೆ ಹೊಳೆಯುವ ಶಂಖಚಕ್ರಗಳ ಶೋಭೆಯಿಂದ ನಿನ್ನ ಎರಡು ಪಕ್ಕಗಳಲ್ಲಿ ರಾತ್ರಿ-ಹಗಲುಗಳು ಇವೆಯೆಂದು ಭಾವಿಸಿ, ನಕ್ಷತ್ರಗಳಂತೆ ಕಾಣುವ ಹೊಸ ಮುತ್ತುಗಳಿಂದ ರಮ್ಯವಾದ ನಿನ್ನ ರೂಪವನ್ನು ಕಂಡು ನೀನೇ ಮಹಾಪುರುಷರೂಪವನ್ನು ಧರಿಸಿರುವೆ ಎಂದು ತಿಳಿಯುತ್ತೇನೆ.

**ವಿವರಣೆ :** ಪುರುಷಸೂಕ್ತದಲ್ಲಿ ಹಗಲು ರಾತ್ರಿಗಳು ಪರಮಾತ್ಮನ ಎರಡು ಪಾರ್ಶ್ವಗಳೆಂದೂ, ನಕ್ಷತ್ರಗಳು ಅವನ ರೂಪವೆಂದೂ ವರ್ಣಿಸಲಾಗಿದೆ. 'ಅಹೋರಾತ್ರೇ ಪಾರ್ಶ್ವೇ ನಕ್ಷತ್ರಾಣಿ ರೂಪಮ್' ಎಂದು ಅಲ್ಲಿ ಇರುವ ಮಂತ್ರವನ್ನು ಆಧಾರವಾಗಿಟ್ಟುಕೊಂಡು ಈ ಶ್ಲೋಕವನ್ನು ಕವಿ ರಚಿಸಿದ್ದಾನೆ. ವರದರಾಜನ ಎರಡು ಕೈಗಳಲ್ಲಿ ಶಂಖಚಕ್ರಗಳಿವೆ. ಶಂಖವು ಚಂದ್ರನಿಗೂ

ಚಕ್ರವು ಸೂರ್ಯನಿಗೂ ಸಂಕೇತ. ಮೌಕ್ತಿಕಗಳು ನಕ್ಷತ್ರಗಳಿಗೆ ಸಂಕೇತ. ಹೀಗೆ ರಾತ್ರಿ-ಹಗಲುಗಳೂ ನಕ್ಷತ್ರಗಳೂ ಇರುವುದರಿಂದ ವರದರಾಜನೇ ಪುರುಷಸೂಕ್ತದಲ್ಲಿ ವರ್ಣಿತವಾಗಿರುವ ಮಹಾಪುರುಷನಾಗಿದ್ದಾನೆ.

ಸಂವರ್ತಜೃಂಭಿತ ವಿಕರ್ತನದುರ್ನಿರೀಕ್ಷಂ
ಪಶ್ಯಾಮಿ ದಕ್ಷಿಣಕರೇ ತವ ಚಕ್ರರಾಜಮ್ ।
ದೈತ್ಯೌಘ ಸಿಂಧುಪತಿಮಂಥಮಹಾಚಲಸ್ಯ
ಬಾಹೋಃ ಪ್ರತಾಪಘನಮಿದ್ಧಮಿವೋದ್ಗತಂ ತೇ ॥ ೭೬ ॥

**ಅನುವಾದ** : ಪ್ರಳಯಕಾಲದಲ್ಲಿ ವಿಜೃಂಭಿಸುವ ಸೂರ್ಯನಂತೆ ನೋಡಲಸಾಧ್ಯವಾದ, ನಿನ್ನ ಬಲಗೈಯಲ್ಲಿ ಹೊಳೆಯುವ ಚಕ್ರರಾಜನನ್ನು ದೈತ್ಯರ ಸಮೂಹವೆಂಬ ಸಮುದ್ರವನ್ನು ಮಥಿಸುವುದರಲ್ಲಿ ಮಂದರಪರ್ವತವಾಗಿರುವ ನಿನ್ನ ಬಾಹುವಿನ ಘನೀಭವಿಸಿದ ಪ್ರತಾಪವೆಂದು ತಿಳಿಯುತ್ತೇನೆ.

**ವಿವರಣೆ** : ಪ್ರಳಯಕಾಲದಲ್ಲಿ ಸೂರ್ಯನು ಅತ್ಯಂತ ಉಷ್ಣಮಯನಾಗಿ ಸಮಸ್ತ ಲೋಕಗಳನ್ನೂ ಸುಡುತ್ತಾನೆ ಎಂದು ಶಾಸ್ತ್ರಗಳು ಹೇಳುತ್ತವೆ. ಅಂಥ ಸೂರ್ಯನನ್ನು ಕಣ್ಣುಗಳಿಂದ ನೋಡುವುದು ಸಾಧ್ಯವಿಲ್ಲ. ಪರಮಾತ್ಮನ ಬಲಗೈಯಲ್ಲಿರುವ ಚಕ್ರವೂ ಹಾಗೆ ಪ್ರಕಾಶಮಾನವಾಗಿದೆ. ಆ ಕೈ ಶತ್ರುಗಳಾದ ದೈತ್ಯರ ಸಮೂಹವೆಂಬ ಸಮುದ್ರವನ್ನು ಮಥಿಸುವುದರಲ್ಲಿ ಮಂದರಾಚಲವಾಗುತ್ತದೆ. ಅದರ ಪ್ರತಾಪವೇ ಘನೀಭವಿಸಿ ಸುದರ್ಶನ ಚಕ್ರವಾಗಿದೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ಆಭಾತಿ ದೇವ ವಿಧೃತಸ್ತವ ಸವ್ಯಪಾಣಾ-
ವಂತರ್ಬಹಿಶ್ಚ ಶುಚಿರಚ್ಯುತ ಪಾಂಚಜನ್ಯಃ ।
ಅಂತೇ ವಸನ್ನಿವ ಗಲಸ್ಯ ಗುರೋರ್ಗಭೀರ-
ಧ್ಯಾನಕ್ರಿಯೋಪನಿಷದಧ್ಯಯನಾರ್ಥಮೇಷಃ ॥ ೭೭ ॥

**ಅನುವಾದ** : ಅಚ್ಯುತನೆನಿಸಿದ ದೇವ, ನಿನ್ನ ಎಡಗೈಯಲ್ಲಿರುವ

ಪಾಂಚಜನ್ಯವೆಂಬ ಶಂಖವು ಅಂತರಂಗದಲ್ಲೂ ಬಹಿರಂಗದಲ್ಲೂ ಶುಚಿಯಾಗಿದ್ದು, ಗುರುವಾದ ನಿನ್ನ ಕಂಠದಿಂದ ಗಂಭೀರನಾದವೆಂಬ ಉಪನಿಷತ್ತನ್ನು ಕಲಿಯಲು ಬಂದು ಕುಳಿತಿರುವ ಶಿಷ್ಯನಂತೆ ಕಾಣುತ್ತದೆ.

**ವಿವರಣೆ :** ವರದರಾಜನ ಎಡಗೈಯಲ್ಲಿ ಪಾಂಚಜನ್ಯವೆಂಬ ಶಂಖವಿದೆ. ಪರಮಾತ್ಮನ ಕಂಠವೇ ಆ ಶಂಖಕ್ಕೆ ಗುರು ಎಂದರೆ ಪರಮಾತ್ಮನ ಕಂಠದ ಶಬ್ದವು ಶಂಖನಾದಕ್ಕಿಂತ ಗಂಭೀರ. ಶಂಖವು ಆ ಶಬ್ದವನ್ನು ಕಲಿಯಲು ಅಂತರಂಗದ (ಮನಸ್ಸಿನ) ಹಾಗೂ ಬಹಿರಂಗದ (ಶರೀರದ) ಶುದ್ಧಿಯನ್ನು ಸಾಧಿಸಿಕೊಂಡು ಹತ್ತಿರಬಂದು ಕುಳಿತಿದೆ. ಆದ್ದರಿಂದ ಅದು ಶಿಷ್ಯನಂತೆ ಕಾಣುತ್ತದೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

**ಕೌಮೋದಕೀ ಸ್ಫುರತಿ ತೇ ಕರಪಲ್ಲವಾಗ್ರೇ**
**ವೈರಿಂಚವಾಕ್ಯವಿಕೃತೇವ ಸರಸ್ವತೀ ಸಾ ।**
**ತ್ರಿಸ್ರೋತಸಸ್ತವ ಪದಾಬ್ಜಭುವೋ ವಿಶೇಷ-**
**ಮಾಕಾಂಕ್ಷ್ಯ ಪಾಣಿಕಮಲಾತ್ತವ ನಿಸ್ಸರಂತೀ ॥ ೭೮ ॥**

**ಅನುವಾದ :** ವರದರಾಜ, ನಿನ್ನ ಕೈಯ ತುದಿಯಲ್ಲಿ ಕೌಮೋದಕೀ ಎಂಬ ಗದೆಯು ಕಂಗೊಳಿಸುತ್ತಿದ್ದು, ನಿನ್ನ ಪಾದಕಮಲದಿಂದ ಹುಟ್ಟಿದ ಗಂಗೆಗಿಂತ ಹೆಚ್ಚಿನ ಉತ್ಕರ್ಷವನ್ನು ಪಡೆಯಲು ಇಷ್ಟಪಟ್ಟು, ನಿನ್ನ ಹಸ್ತಕಮಲದಿಂದ ಹೊರಬರುತ್ತಿರುವ ಸರಸ್ವತಿಯಂತೆ ಕಾಣುತ್ತದೆ. ಬ್ರಹ್ಮನ ವಾಕ್ಯದಿಂದ ಆವಳು ನೊಂದಿರುವುದು ಇದಕ್ಕೆ ಕಾರಣವಿರಬಹುದು.

**ವಿವರಣೆ :** ಬ್ರಹ್ಮಾಂಡಪುರಾಣದ ಒಂದು ಕಥೆಯಲ್ಲಿ ಬ್ರಹ್ಮನು ಲಕ್ಷ್ಮಿಯೇ ಸರಸ್ವತಿಗಿಂತ ಶ್ರೇಷ್ಠಳು ಎಂದು ಹೇಳಿದ್ದರಿಂದ ಸರಸ್ವತಿಗೆ ದುಃಖ ಉಂಟಾಯಿತೆಂದು ಹೇಳಿದೆ. ಆ ಸರಸ್ವತಿಯೇ ಭೂಲೋಕದಲ್ಲಿ ಗುಪ್ತಗಾಮಿನಿಯಾಗಿ ಹರಿಯುವ ಸರಸ್ವತೀ ನದಿ. ವರದರಾಜನ ಕೈಯಲ್ಲಿ ಕಂಗೊಳಿಸುವ ಕೌಮೋದಕೀ ಎಂಬ ಗದೆಗೂ ಆ ನದಿಗೂ ಹೋಲಿಕೆಯನ್ನು ಕಲ್ಪಿಸಲಾಗಿದೆ. ಅದಕ್ಕೆ ಕಾರಣ ವಿಷ್ಣು ಪಾದೋದ್ಭವೆಯಾದ ಗಂಗೆಗಿಂತ

ಹೆಚ್ಚಿನ ಉತ್ಕರ್ಷವನ್ನು ತಾನು ಪಡೆಯಬೇಕು ಎಂದು ಸರಸ್ವತಿ ಆಸೆ ಪಡುವುದು. ಅದಕ್ಕಾಗಿ ವಿಷ್ಣುವಿನ ಕರಕಮಲದಿಂದ ತಾನು ಹುಟ್ಟುವುದು ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ಹಸ್ತೇ ವಿರಾಜತಿ ತವಾಭಯಮುದ್ರಿತೇಽಸ್ಮಿನ್
ಅವ್ಯಾಜಕೋಮಲರುಚಿಪ್ರಕರಾಭಿರಾಮೇ ।
ವಜ್ರೋರ್ಮಿಕಾಂಶುನಿಕರಃ ಕಮಲಾಧಿರಾಜ್ಯ-
ಪಟ್ಟಾಭಿಷೇಕಸಲಿಲೌಘ ಇವಾವದಾತಃ ॥ ೭೯ ॥

**ಅನುವಾದ :** ಅಭಯಮುದ್ರೆಯನ್ನುಳ್ಳ ನಿನ್ನ ಹಸ್ತವು ಸ್ವಾಭಾವಿಕವಾದ ಕೋಮಲ ಕಿರಣಗಳ ಸಮೂಹದಿಂದ ಸುಂದರವಾಗಿದೆ. ಅದರಲ್ಲಿ ವಜ್ರದ ಉಂಗುರುಗಳ ಶುಭ್ರ ಕಿರಣಗಳ ಪುಂಜವು ಲಕ್ಷ್ಮಿಗೆ ಮಾಡುವ ರಾಜ್ಯಾಭಿಷೇಕದ ನೀರಿನಂತೆ ಸುಂದರವಾಗಿ ವಿರಾಜಿಸುತ್ತಿದೆ.

**ವಿವರಣೆ :** ಪವಿತ್ರನದಿಗಳಿಂದ ಶುಭ್ರವಾದ ನೀರನ್ನು ಪಟ್ಟಾಭಿಷೇಕಕ್ಕಾಗಿ ತರುತ್ತಾರೆ. ವರದರಾಜನ ಕೈಬೆರಳುಗಳಲ್ಲಿ ಹೊಳೆಯುವ ವಜ್ರದುಂಗುರಗಳ ಹೊಳಪೂ ಆ ರೀತಿ ಶುಭ್ರವಾಗಿರುವುದರಿಂದ ಲಕ್ಷ್ಮಿಯ ಅಭಿಷೇಕಕ್ಕಾಗಿ ತಂದಿರುವ ಪವಿತ್ರ ಜಲದಂತಿದೆ ಎಂದಿಲ್ಲಿ ಉತ್ಪ್ರೇಕ್ಷಿಸಲಾಗಿದೆ.

ನಾಮ್ನೈವ ತೇ ವರದ ವಾಂಛಿತದಾತೃಭಾವಂ
ವ್ಯಾಖ್ಯಾತ್ಯತೋ ನ ವಹಸೇ ವರದಾನಮುದ್ರಾಮ್ ।
ನ ಹ್ಯಾಗಮೋದಿತರಸಃ ಶ್ರುತಿಸಿದ್ಧಮರ್ಥಂ
ಲಿಂಗೇನ ಬೋಧ್ಯಮುರರೀಕುರುತೇ ವಿಪಶ್ಚಿತ್ ॥ ೮೦ ॥

**ಅನುವಾದ :** ವರದರಾಜ, ನಿನ್ನ ಹೆಸರೇ ನೀನು ಭಕ್ತರ ಅಭೀಷ್ಟಗಳನ್ನು ಕೊಡುವೆಯೆಂದು ಸ್ಪಷ್ಟವಾಗಿ ಹೇಳುತ್ತದೆ. ಆದ್ದರಿಂದಲೇ ನೀನು ಅಭಯ ಮುದ್ರೆಯನ್ನು ಕೈಯಲ್ಲಿ ಧರಿಸಿಲ್ಲ. ಆಗಮದಲ್ಲಿ ಆದರವುಳ್ಳ ವಿದ್ವಾಂಸನು ಶ್ರುತಿಸಿದ್ಧವಾದ ಅರ್ಥವನ್ನು ಲಿಂಗದಿಂದ ಬೋಧ್ಯವೆಂದು ಒಪ್ಪಿಕೊಳ್ಳಲಾರ.

**ವಿವರಣೆ** : ಅನೇಕ ದೇವತೆಗಳು ವರದಾನಮುದ್ರೆಯನ್ನು ಕೈಯಲ್ಲಿ ಧರಿಸಿರುತ್ತಾರೆ. ಆದರೆ ವರದರಾಜನ ಮೂರ್ತಿಗೆ ವರದಾನ ಮುದ್ರೆ ಇಲ್ಲ. ವರದ ಎಂಬ ಹೆಸರೇ ಸ್ಪಷ್ಟವಾಗಿ ಆ ಗುಣವನ್ನು ಹೇಳುವುದರಿಂದ ಅಭಯಮುದ್ರೆಯ ಆವಶ್ಯಕತೆ ಇಲ್ಲ ಎಂದು ಕವಿ ನಿರೂಪಿಸುತ್ತಾನೆ. ಮೀಮಾಂಸಕರ ಪ್ರಕಾರ ಶ್ರುತಿಯು ಪ್ರಬಲ ಪ್ರಮಾಣ. ಲಿಂಗವು ದುರ್ಬಲ ಪ್ರಮಾಣ. ಆಗಮಗಳಲ್ಲಿ ಶ್ರದ್ಧೆಯುಳ್ಳವರು ಶ್ರುತಿಯಿಂದ ಸಿದ್ಧವಾಗುವ ಅರ್ಥದ ಬಗೆಗೆ ಲಿಂಗವನ್ನು ಆಶ್ರಯಿಸುವುದಿಲ್ಲ. ಆದ್ದರಿಂದ ವರದ ಎಂಬ ಹೆಸರನ್ನುಳ್ಳ ಪರಮಾತ್ಮನು ಅಭಯಮುದ್ರೆಯನ್ನು ಧರಿಸಬೇಕಾಗಿಲ್ಲ ಎಂದು ಇಲ್ಲಿ ಸೂಚಿತವಾಗಿದೆ. ಇದಕ್ಕೆ ಪ್ರಮಾಣವಾಗಿ ವಾಮನ ಪುರಾಣದ ಒಂದು ಶ್ಲೋಕವನ್ನು ಉದಾಹರಿಸಬಹುದು -

*ಅರ್ಥಿಭ್ಯೋ ವೈ ವರಂ ದತ್ತೇ ಪ್ರಣತಾರ್ತಿವಿನಾಶನಃ ।*
*ಆಖ್ಯಾಂ ವರದರಾಜೇತಿ ಯಯೌ ನಿತ್ಯಂ ಕೃತಾರ್ಥಯನ್ ॥*

ಈ ಪದ್ಯದ ಉತ್ತರಾರ್ಧವು ಕುವಲಯಾನಂದದಲ್ಲಿ 'ವಿಶ್ವಪ್ರಸಿದ್ಧತರ ವಿಪ್ರಕುಲಪ್ರಸೂತೇರ್ಯಜ್ಞೋಪವೀತವಹನಂ ಹಿ ನ ಖಲ್ವಪೇಕ್ಷ್ಯಮ್' ಎಂದು ಕಂಡುಬರುತ್ತದೆ.

**ಆಭಾತಿ ಮೌಕ್ತಿಕಗುಣಗ್ರಥಿತೈರನಲ್ಪೈಃ**
**ನೀಲೋತ್ಪಲೈರ್ವಲಯಿತಸ್ತವ ನಾಥ ಕಂಠಃ ।**
**ಸಂವರ್ತಮೇಘವಸತಿಂ ಧ್ವನನೈಸ್ತದಂತಃ**
**ನಿಶ್ಚಿತ್ಯ ತನ್ನಿಕಟಗೈರಿವ ಮೇಘಡಿಂಭೈಃ ॥ ೮೦ ॥**

**ಅನುವಾದ** : ಸ್ವಾಮಿನ್ ವರದರಾಜ, ಮುತ್ತಿನ ಹಾರದ ಮಧ್ಯೆ ಪೋಣಿಸಲ್ಪಟ್ಟಿರುವ ಅನೇಕ ಕುವಲಯಗಳಿಂದ ನಿನ್ನ ಕಂಠವು ಅದರ ಧ್ವನಿಗಳಿಂದ ಒಳಗೆ ಪ್ರಳಯಕಾಲದ ಸಂವರ್ತಕವೆಂಬ ಮೇಘವಿದೆಯೆಂದು ಊಹಿಸಿ ಅದರ ಸಮೀಪಕ್ಕೆ ಬಂದಿರುವ ಪುಟ್ಟಪುಟ್ಟ ಮೋಡಗಳ ಮರಿಗಳಿಂದ ಸುತ್ತುವರಿಯಲ್ಪಟ್ಟದ್ದಂತೆ ಕಾಣುತ್ತದೆ.

**ವಿವರಣೆ** : ಪರಮಾತ್ಮನು ಮಾತನಾಡುವಾಗ ಧ್ವನಿಯು ಅತ್ಯಂತ ಗಂಭೀರವಾಗಿ ಇರುವುದರಿಂದ ಅವನ ಕಂಠದೊಳಗೆ ಸಂವರ್ತಕವೆಂಬ ಮೇಘ ಇದ್ದಿರಬಹುದು ಎಂದು ನಿಶ್ಚಯಿಸಿ ಮರಿಮೇಘಗಳು ಅವರ ಬಳಿಗೆ ಬಂದಿರುವಂತೆ ತೋರುತ್ತದೆ. ಹೀಗೆ ಉತ್ಪ್ರೇಕ್ಷಿಸಲು ಕಾರಣವೇನೆಂದರೆ ಪರಮಾತ್ಮನ ಕಂಠದಲ್ಲಿ ಕನ್ನೈದಿಲೆಗಳ ಮಾಲೆಯು ಕಂಗೊಳಿಸುತ್ತಿದೆ. ಅವು ಕಪ್ಪು ಕಾಂತಿಯಿಂದ ಚಿಕ್ಕ ಮೋಡಗಳಂತೆ ತೋರುತ್ತವೆ.

**ಯದ್ ಬ್ರಹ್ಮಣಶ್ಚ ಜನಿಭೂಃ ಪ್ರಿಯಮಿಂದಿರಾಯಾಃ**
**ಸಸ್ಪರ್ಧಮೋಷಧಪತೌ ಚ ಸಕರ್ಣಿಕಂ ಚ ।**
**ಏತೈರ್ಗುಣೈರ್ಗುಣನಿಧೇ ಕತಮಸ್ತ್ವದೀಯಂ**
**ವಕ್ತ್ರಂ ಮನೋಜ್ಞಮವಗಚ್ಛತು ನಾರವಿಂದಮ್ ॥ ೮೨ ॥**

**ಅನುವಾದ** : ವರದರಾಜ, ನಿನ್ನ ಮುಖವು ಬ್ರಹ್ಮನ ಉತ್ಪತ್ತಿಸ್ಥಾನ, ಇಂದಿರೆಗೆ ಪ್ರಿಯವಾದದ್ದು, ಚಂದ್ರನೊಡನೆ ಸ್ಪರ್ಧಿಸುವುದು, ಕರ್ಣಿಕವನ್ನು ಹೊಂದಿರುವುದು ಮತ್ತು ಮನೋಹರವಾದುದೂ ಆಗಿದೆ. ಈ ಗುಣಗಳಿಂದ ಯಾರು ತಾನೆ ನಿನ್ನ ಮುಖವನ್ನು ಅರವಿಂದವೆಂದು ತಿಳಿಯದಿರಲು ಸಾಧ್ಯ ?

**ವಿವರಣೆ** : ಇಲ್ಲಿ ಪರಮಾತ್ಮನ ಮುಖಕ್ಕೂ ಕಮಲಕ್ಕೂ ಸಮಾನವಾದ ಧರ್ಮಗಳನ್ನು ಕವಿ ತೋರಿಸಿದ್ದಾನೆ. ಮುಖವು ಬ್ರಹ್ಮದ (ವೇದದ) ಉತ್ಪತ್ತಿ ಸ್ಥಾನ, ಕಮಲವು ಬ್ರಹ್ಮನ ಉತ್ಪತ್ತಿ ಸ್ಥಾನ. ಎರಡೂ ಲಕ್ಷ್ಮಿಗೆ ಪ್ರಿಯವಾದವು. ಎರಡೂ ಚಂದ್ರನೊಡನೆ ಸ್ಪರ್ಧಿಸುವ ಗುಣವನ್ನು ಹೊಂದಿವೆ. ಎರಡೂ ಸಕರ್ಣಿಕ (ಮುಖದಲ್ಲಿ ಕರ್ಣಾಭರಣವಿದೆ, ಕಮಲದಲ್ಲಿ ಕರ್ಣಿಕಾ = ಪುಷ್ಪಮಧ್ಯಾವಯವ ಇದೆ). ಈ ಕಾರಣಗಳಿಂದ ಎಲ್ಲರೂ ವರದರಾಜನ ಮುಖವನ್ನು ಕಮಲವೆಂದು ತಿಳಿದರೆ ತಪ್ಪಿಲ್ಲ ಎಂದು ಕವಿಯ ಭಾವನೆ. ಶ್ಲೇಷ ಭಿತ್ತಿಕ ಅಭೇದಾಧ್ಯವಸಾಯಮೂಲವಾದ ರೂಪಕಾಲಂಕಾರ.

**ವಕ್ತ್ರೇಣ ತೇ ಯದಭಿಭೂತಮಭೂತ್ಸರೋಜಂ**
**ತನ್ನಾಭಿಭೂತಮಿತಿ ಶಬ್ದಮವಾಪ್ಯ ನೂನಮ್ ।**
**ಶಬ್ದಚ್ಛಲಾದಪನಿನೀಷು ಜನಾಪವಾದಂ**
**ನಾಭೇರಭೂತ್ ತವ ರಮಾಧಿಪ ವಿಶ್ರುತಾಯಾಃ ॥ ೮೩ ॥**

**ಅನುವಾದ :** ರಮಾಪತಿ ವರದರಾಜ, ಕಮಲವು ನಿನ್ನ ಮುಖದಿಂದ ಅಭಿಭೂತವಾಯಿತು. ಆದರೂ ಈ ಜನಾಪವಾದವನ್ನು ಶಬ್ದಚ್ಛಲದಿಂದ ತೊಳೆದುಕೊಳ್ಳಲು ಬಯಸಿ 'ನಾಭಿಭೂತ' ಎಂಬ ಶಬ್ದವನ್ನು ಪಡೆಯಲು ಅದು ಪ್ರಸಿದ್ಧವಾದ ನಿನ್ನ ನಾಭಿಯಿಂದ ಹುಟ್ಟಿತು.

**ವಿವರಣೆ :** ನ್ಯಾಯಶಾಸ್ತ್ರದಲ್ಲಿ ಶಬ್ದಚ್ಛಲವನ್ನು ವರ್ಣಿಸಿದ್ದಾರೆ. ಪ್ರತಿವಾದಿಯು ಹೇಳಿದ ಶಬ್ದದ ಸರಿಯಾದ ಅರ್ಥ ತಿಳಿದಿದ್ದರೂ ಅದಕ್ಕೆ ಬೇರೊಂದು ಅರ್ಥವನ್ನು ಕಲ್ಪಿಸಿ ಅದರ ಬಗೆಗೆ ಪ್ರಶ್ನಿಸುವುದು ಶಬ್ದಚ್ಛಲ. 'ಇವನು ನವಕಂಬಲ' ಎಂದರೆ ಈ ವ್ಯಕ್ತಿ ಹೊಸ ಕಂಬಳಿಯನ್ನು ಹೊಂದಿದ್ದಾನೆ ಎಂಬುದು ಸರಿಯಾದ ಅರ್ಥ. ಅದು ತಿಳಿದಿದ್ದರೂ ಕೂಡ, ನವ ಎಂಬ ಶಬ್ದಕ್ಕೆ ಒಂಬತ್ತು ಎಂಬ ಅರ್ಥವನ್ನು ಕಲ್ಪಿಸಿಕೊಂಡು, ಇವನಲ್ಲಿ ಎರಡು ಕಂಬಳಿಗಳೂ ಇಲ್ಲ ಇವನು ನವಕಂಬಲ (ಒಂಬತ್ತು ಕಂಬಳಿಗಳನ್ನುಳ್ಳವನು) ಎಂದು ಹೇಗೆ ಹೇಳಿದೆ ? ಎಂದು ಪ್ರಶ್ನಿಸುವುದು ಶಬ್ದಚ್ಛಲ.

ಪ್ರಕೃತದಲ್ಲಿ ಕಮಲವು ವರದರಾಜನ ಮುಖದಿಂದ ಅಭಿಭೂತ (ಎಂದರೆ ಸೋತಿರುವುದು). ಈ ಅಪಕೀರ್ತಿಯನ್ನು ಶಬ್ದಚ್ಛಲ ದಿಂದಲಾದರೂ ತಪ್ಪಿಸಿಕೊಳ್ಳಲು ಇಚ್ಛಿಸಿ ಅದು 'ನಾಭಿಭೂತ' (ಸೋತಿಲ್ಲದಿರುವುದು ಅಥವಾ ನಾಭಿಯಿಂದ ಹುಟ್ಟಿದುದು) ಆಗಿದೆ ಎಂದು ಶ್ಲೇಷಚಮತ್ಕಾರದಿಂದ ಕವಿ ಹೇಳಿದ್ದಾನೆ. ಹೇತೂತ್ಪ್ರೇಕ್ಷಾಲಂಕಾರ.

ಉನ್ಮೀಲಯನ್ ಕುಮುದಮುಜ್ಜ್ವಲಯನ್ ಗಿರೀಶ-
ಮುನ್ಮೂಲಯನ್ ವಿಷಮವಾಹಭವಾಭಿತಾಪಮ್ ।
ಉದ್ದೀಪಯನ್ ವರವಧೂಜನತಾನುರಾಗ-
ಮುದ್ಯೋತತೇ ವರದ ತೇ ವದನಾಮೃತಾಂಶುಃ ॥ ೮೪ ॥

**ಅನುವಾದ :** ವರದರಾಜ, ನಿನ್ನ ಮುಖಚಂದ್ರನು ಕುಮುದಪುಷ್ಪಗಳನ್ನು ಅರಳಿಸುತ್ತಾ, ಗಿರೀಶನನ್ನು ಉಜ್ಜ್ವಲನನ್ನಾಗಿ ಮಾಡುತ್ತಾ, ಸೂರ್ಯನ ಬಿಸಿಲಿನ ತಾಪವನ್ನು (ತೀಕ್ಷ್ಣವಾದ ಸಂಸಾರತಾಪವನ್ನು) ದೂರಮಾಡುತ್ತಾ, ವರ-ವಧೂ ಜನರ ಅನುರಾಗವನ್ನು ಹೆಚ್ಚಿಸುತ್ತಾ ಕಂಗೊಳಿಸುತ್ತಿದ್ದಾನೆ.

**ವಿವರಣೆ :** ಚಂದ್ರನು ಮಾಡುವ ವಿಶಿಷ್ಟ ಕಾರ್ಯಗಳನ್ನೆಲ್ಲಾ ವರದರಾಜನ ಮುಖಚಂದ್ರನೂ ಮಾಡುತ್ತಾನೆ. ಕುಮುದ ಎಂದರೆ ನೈದಿಲೆ ಎಂಬ ಹೂವು ಎಂಬ ಅರ್ಥವಿರುವಂತೆ 'ಕು-ಮುದ' ಭೂಮಂಡಲಕ್ಕೆ ಆನಂದ ಎಂಬ ಅರ್ಥವೂ ಇದೆ. ಗಿರೀಶ ಎಂದರೆ ಚಂದ್ರನ ಪಕ್ಷದಲ್ಲಿ ಶಿವ, ವರದರಾಜನ ಪಕ್ಷದಲ್ಲಿ ಹಸ್ತಿಶೈಲ. ವಿಷಮವಾಹ ಎಂದರೆ ಬೆಸಸಂಖ್ಯೆಯ ಕುದುರೆಗಳನ್ನು ಹೊಂದಿರುವ ಸೂರ್ಯ ಅಥವಾ ವಿಷಮತೆಯನ್ನುಂಟುಮಾಡುವುದು ಎಂಬ ಶ್ಲೇಷವನ್ನು ಇಲ್ಲಿ ಗಮನಿಸಬೇಕು. ರೂಪಕಾಲಂಕಾರ.

ಪಕ್ಷದ್ವಯಕ್ರಮಿಮಪೋಷವಿಭಾವ್ಯಮಾನ-
ಚಾಂದ್ರಾಯಣವ್ರತನಿಷೇವಣ ಏವ ನಿತ್ಯಮ್ ।
ಕುರ್ವನ್ ಪ್ರದಕ್ಷಿಣಮುಪೇಂದ್ರ ಸುರಾಲಯಂ ತೇ
ಲಿಪ್ಸುರ್ಮುಖಾಬ್ಜರುಚಿಮೇಷ ತಪಸ್ಯತೀಂದುಃ ॥ ೮೫ ॥

**ಅನುವಾದ :** ಉಪೇಂದ್ರನೆಂಬ ಹೆಸರನ್ನುಳ್ಳ ವರದರಾಜ, ಚಂದ್ರನು ಚಾಂದ್ರಾಯಣವೆಂಬ ವ್ರತವನ್ನು ಮಾಡುತ್ತಿರುವನೆಂದು ಕೃಷ್ಣ-ಶುಕ್ಲಪಕ್ಷಗಳಲ್ಲಿ ಅವನಿಗಾಗುವ ಕೃಶತ್ವ ಮತ್ತು ವೃದ್ಧಿಗಳಿಂದ ತಿಳಿದುಬರುತ್ತದೆ. ಹಾಗೆ ವ್ರತವನ್ನಾಚರಿಸುತ್ತಾ ಸುರಾಲಯವನ್ನು (ದೇವಾಲಯವನ್ನು ಅಥವಾ

ಮೇರುಪರ್ವತವನ್ನು) ಪ್ರದಕ್ಷಿಣೆ ಮಾಡುತ್ತಾ, ನಿನ್ನ ಮುಖದ ಕಾಂತಿಯನ್ನು ಪಡೆಯಲು ಅಪೇಕ್ಷಿಸಿ ಚಂದ್ರನು ತಪಸ್ಸನ್ನು ಮಾಡುತ್ತಿದ್ದಾನೆ.

**ವಿವರಣೆ :** ಕೃಷ್ಣಪಕ್ಷದ ಮೊದಲನೆಯ ದಿನ ಹದಿನೈದು ತುತ್ತು ಆಹಾರವನ್ನು ಸ್ವೀಕರಿಸಿ ಅನಂತರ ಮಾರನೆಯ ದಿನದಿಂದ ಒಂದೊಂದು ತುತ್ತು ಕಡಿಮೆ ಮಾಡಿ ಶುಕ್ಲಪಕ್ಷದಲ್ಲಿ ಮತ್ತೆ ಒಂದೊಂದು ತುತ್ತು ಜಾಸ್ತಿ ಮಾಡುತ್ತಾ ತಿಂಗಳ ಕೊನೆಯಲ್ಲಿ ಮೊದಲಿನ ಪ್ರಮಾಣದ ಆಹಾರವನ್ನು ಸೇವಿಸುವುದಕ್ಕೆ ಚಾಂದ್ರಾಯಣ ವ್ರತವೆಂದು ಹೆಸರು. ಚಂದ್ರನು ಈ ವ್ರತವನ್ನು ಆಚರಿಸಿದ ಕಾರಣದಿಂದಲೇ ಅವನ ಶರೀರ ಕೃಷ್ಣಪಕ್ಷದಲ್ಲಿ ಕ್ರಮೇಣ ಕ್ಷಯಿಸಿ ಶುಕ್ಲಪಕ್ಷದಲ್ಲಿ ಕ್ರಮೇಣ ವರ್ಧಿಸುತ್ತಿದೆ ಎಂದು ಕವಿಯ ಭಾವ. ಅಂತೆಯೇ ಚಂದ್ರನು ಮೇರುಪರ್ವತಕ್ಕೆ ಪ್ರದಕ್ಷಿಣೆ ಹಾಕುತ್ತಿರುತ್ತಾನೆ. ಇದೆಲ್ಲವನ್ನೂ ಮಾಡಲು ಕಾರಣವೇನೆಂದರೆ ಇಂಥ ತಪಸ್ಸಿನಿಂದ ವರದರಾಜನ ಮುಖದ ಕಾಂತಿಯು ತನಗೂ ಬರಬೇಕು ಎಂಬ ಅಭಿಲಾಷೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ. ಸುರಾಲಯ ಎಂಬ ಶಬ್ದಕ್ಕೆ ದೇವಾಲಯ, ಮೇರುಪರ್ವತ ಎಂಬ ಎರಡು ಅರ್ಥಗಳಿರುವುದರಿಂದ ಚಂದ್ರನು ಸ್ವಾಭಾವಿಕವಾಗಿ ಮಾಡುವ ಮೇರುಪ್ರದಕ್ಷಿಣೆಯನ್ನು ಇಷ್ಟದೇವತೆಯ ದೇವಾಲಯದ ಪ್ರದಕ್ಷಿಣೆ ಎಂದು ಇಲ್ಲಿ ಕವಿ ಸ್ವೀಕರಿಸಿದ್ದಾನೆ.

**ನಾಥ ತ್ವದೀಯಮಕಲಂಕಮಿಮಂ ಮುಖೇಂದು-**
**ಮಾಪೀಯ ತೃಪ್ಯತಿ ಸದಾ ವಸುಧಾ ಯತಸ್ತೇ ।**
**ತೇನೈವ ಕಿಂ ನವಸುಧಾರಸಗೋಚರೋಽಭೂ-**
**ದಿಂದುಃ ಕಲಂಕಮಲಿನೀಕೃತಮಧ್ಯಭಾಗಃ ॥ ೮೬ ॥**

**ಅನುವಾದ :** ವರದರಾಜಸ್ವಾಮಿ, ಈ ವಸುಧೆಯು ನಿನ್ನ ನಿಷ್ಕಲಂಕ ಮುಖಚಂದ್ರನನ್ನು ಯಾವಾಗಲೂ ಕುಡಿದು ತೃಪ್ತಿಗೊಳ್ಳುತ್ತದೆ. ಈ ಕಾರಣದಿಂದಲೇ ಕಲಂಕದಿಂದ ಕೊಳೆಯಾದ ಮಧ್ಯಭಾಗವನ್ನುಳ್ಳ ಚಂದ್ರನು ನವಸುಧಾರಸಗೋಚರನಾದನೇನು ?

**ವಿವರಣೆ** : ಇಲ್ಲಿ ಕವಿಯು ಸಭಂಗಶ್ಲೇಷವನ್ನು ಬಳಸಿ ಚಮತ್ಕಾರವನ್ನು ತಂದಿರುವುದರಿಂದ ಅದು ಅನುವಾದದಲ್ಲಿ ಬರುವುದು ಅಸಾಧ್ಯ. ನವ ಸುಧಾರಸಗೋಚರ ಎಂದರೆ ಹೊಸ ಅಮೃತರಸದಿಂದ ತುಂಬಿದವನು ಎಂದು ಒಂದು ಅರ್ಥವಾದರೆ, ನ–ವಸುಧಾರಸಗೋಚರ ಎಂದು ಅದೇ ಪದವನ್ನು ಓದಿಕೊಂಡಾಗ ಭೂಮಿಯ ಜನರ ಆಸಕ್ತಿಗೆ ಗೋಚರನಲ್ಲ ಎಂಬ ಅರ್ಥವೂ ಬರುತ್ತದೆ. ವಸುಧೆಗೆ ಸದಾ ವರದರಾಜನ ಮುಖಚಂದ್ರನಲ್ಲಿಯೇ ಪ್ರೀತಿ ಇರುವುದರಿಂದ ಅದರ ಜನರು ಆಕಾಶದಲ್ಲಿರುವ, ಕಳಂಕಮಲಿನವಾದ ಚಂದ್ರನಲ್ಲಿ ಯಾವ ಆಸಕ್ತಿಯನ್ನೂ ತೋರಿಸುವುದಿಲ್ಲ. ವರದರಾಜನ ಮುಖವು ಚಂದ್ರನಿಗಿಂತ ಹೆಚ್ಚು ಆಕರ್ಷಕ ಎಂದು ತಾತ್ಪರ್ಯ.

ಆಶ್ರಿತ್ಯ ನೂನಮಮೃತದ್ಯುತಯಃ ಪದಂ ತೇ
ದೇಹಕ್ಷಯೇ ವಿಧೃತದಿವ್ಯ ಪದಾಭಿಮುಖ್ಯಾಃ ।
ಲಾವಣ್ಯಪುಣ್ಯನಿಚಯಂ ಸುಹೃದಿ ತ್ವದಾಸ್ಯೇ
ವಿನ್ಯಸ್ಯ ಯಾಂತಿ ಮಿಹಿರಂ ಪ್ರತಿಮಾಸಭಿನ್ನಾಃ ॥ ೮೭ ॥

**ಅನುವಾದ** : ಪ್ರತಿ ತಿಂಗಳಿನಲ್ಲಿಯೂ ಭಿನ್ನ ಭಿನ್ನರಾದ ಎಲ್ಲ ಚಂದ್ರರೂ ತಮ್ಮ ದೇಹಾವಸಾನಕಾಲದಲ್ಲಿ ನಿನ್ನ ಪದವನ್ನು ಆಶ್ರಯಿಸಿ ದಿವ್ಯಸ್ಥಾನಕ್ಕೆ ಅಭಿಮುಖರಾಗಿ ಹೊರಡುವಾಗ ತಮ್ಮ ಮಿತ್ರನಾದ ನಿನ್ನ ಮುಖದಲ್ಲಿ ಲಾವಣ್ಯರೂಪವಾದ ತಮ್ಮ ಪುಣ್ಯರಾಶಿಯನ್ನು ಅರ್ಪಿಸಿ ಸೂರ್ಯನನ್ನು ಸೇರುತ್ತಾರೆ.

**ವಿವರಣೆ** : ಅಮಾವಾಸ್ಯೆಯಂದು ಚಂದ್ರನು ಸೂರ್ಯನಲ್ಲಿ ಸೇರಿ ಹೋಗುತ್ತಾನೆ. ಆಮೇಲೆ ಹೊಸ ಚಂದ್ರನು ಇನ್ನೊಂದು ತಿಂಗಳಲ್ಲಿ ಹುಟ್ಟಿ ಬರುತ್ತಾನೆ. ಹೀಗೆ ಪ್ರತಿತಿಂಗಳೂ ಬೇರೆ ಬೇರೆ ಚಂದ್ರರು ನಮಗೆ ಕಾಣಸುತ್ತಾರೆ ಎಂಬ ನಂಬಿಕೆಯನ್ನು ಆಧಾರವನ್ನಾಗಿ ಇಟ್ಟುಕೊಂಡು ಈ ಪದ್ಯವನ್ನು ರಚಿಸಲಾಗಿದೆ. ಮಾನವರು ಮುಕ್ತರಾದಾಗ ತಮ್ಮ ಪುಣ್ಯರಾಶಿ ಯನ್ನು ಮಿತ್ರರಿಗೆ ಅರ್ಪಿಸಿ ತಾವು ಸೂರ್ಯಮಂಡಲದ ಮೂಲಕ

ಮೋಕ್ಷವನ್ನು ಪಡೆಯುತ್ತಾರೆ ಎಂದು ಶಾಸ್ತ್ರವು ಹೇಳುವುದನ್ನೂ ಇಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ವರದರಾಜನ ಮುಖವು ಚಂದ್ರನ ಸ್ನೇಹಿತ, ಏಕೆಂದರೆ ಅವರಲ್ಲಿ ಪರಸ್ಪರ ಸಾದೃಶ್ಯವಿದೆ. ಪ್ರತಿ ತಿಂಗಳೂ ಒಬ್ಬೊಬ್ಬ ಚಂದ್ರನು ಮುಕ್ತನಾಗಿ ಸೂರ್ಯಮಂಡಲವನ್ನು ಸೇರುವಾಗ. ತನ್ನ ಲಾವಣ್ಯರೂಪವಾದ ಪುಣ್ಯರಾಶಿಯನ್ನು ವರದರಾಜನ ಮುಖದಲ್ಲಿ ಇಟ್ಟು ಹೋಗುತ್ತಾನೆ. ಈ ಕಾರಣದಿಂದ ವರದರಾಜನ ಮುಖದ ಕಾಂತಿ ಅನಂತಕೋಟಿ ಚಂದ್ರರ ಲಾವಣ್ಯವನ್ನು ಮೀರಿಸಿದೆ ಎಂದು ತಾತ್ಪರ್ಯ. ಉತ್ಪ್ರೇಕ್ಷಾಲಂಕಾರ.

'ನವೋ ನವೋ ಭವತಿ ಜಾಯಮಾನಃ' 'ತಸ್ಯ ಪುತ್ರಾ ದಾಯಮುಪಯಂತಿ ಸುಹೃದಃ ಸಾಧುಕೃತ್ಯಮ್' ಇತ್ಯಾದಿ ಶ್ರುತಿ ವಾಕ್ಯಗಳನ್ನು ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು.

ತ್ವದ್ವಕ್ತ್ರ ಸಾಮ್ಯಮಯಮಂಬುಜಕೋಶಮುದ್ರಾ-
ಭಂಗಾತ್ತ ತತ್ಸುಷಮ ಮಿತ್ರಕರೋಪ ಕ್ಲಪ್ತ್ಯಾ ।
ಲಬ್ಧ್ವಾಪಿ ಪರ್ವಣಿ ವಿಧುಃ ಕ್ರಮಹೀಯಮಾನಃ
ಶಂಸತ್ಯನೀತ್ಯುಪಚಿತಾಂ ಶ್ರಿಯಮಾಶುನಾಶಾಮ್ ॥ ೮೮ ॥

**ಅನುವಾದ :** ಕಮಲಕೋಶದ ಮುದ್ರೆಯನ್ನೊಡೆದು ಕಾಂತಿಯನ್ನು ಪಡೆದ ಮಿತ್ರನ (ಸೂರ್ಯನೆಂಬ ಸ್ನೇಹಿತನ) ಕಿರಣಗಳ ಸಂಪರ್ಕದಿಂದ ಚಂದ್ರನು ಪೂರ್ಣಿಮೆಯ ದಿನ ನಿನ್ನ ಮುಖದ ಹೋಲಿಕೆಯನ್ನು ಪಡೆಯುತ್ತಾನೆ. ಆದರೆ ಆಮೇಲೆ ಕ್ರಮವಾಗಿ ಕ್ಷೀಣಿಸುವ ಆ ಚಂದ್ರನು ಅನೀತಿಯಿಂದ ಪಡೆದ ಸಂಪತ್ತು ಬೇಗನೆ ನಾಶಗೊಳ್ಳುತ್ತದೆ ಎಂಬುದನ್ನು ಲೋಕಕ್ಕೆ ಬೋಧಿಸುತ್ತಾನೆ.

**ವಿವರಣೆ :** ಇಲ್ಲಿ ಮಿತ್ರ, ಕರ ಎಂಬ ಶಬ್ದಗಳ ಶ್ಲೇಷದಿಂದ ಕವಿ ಚಮತ್ಕಾರವನ್ನು ತಂದಿದ್ದಾನೆ. ಕಮಲಗಳು ಮುಚ್ಚಿಕೊಂಡಿದ್ದಾಗ ಅವು ಬಾಗಿಲು ಮುಚ್ಚಿರುವ ನಿಧಿಯನ್ನು ಹೋಲುತ್ತವೆ. ಅದನ್ನು ತೆಗೆದು

ಕಾಂತಿಯನ್ನು ಕದ್ದುಕೊಳ್ಳುವ ಸೂರ್ಯನು ಅನಂತರ ತನ್ನ ಕಿರಣಗಳೆಂಬ ಕೈಗಳಿಂದ ಆ ಕಾಂತಿಸಂಪತ್ತನ್ನು ಚಂದ್ರನಿಗೆ ನೀಡುತ್ತಾನೆ. ಆ ಸಂಪತ್ತಿನಿಂದ ಒಂದುದಿನ ಮಾತ್ರ, ಎಂದರೆ ಪೂರ್ಣಿಮೆಯ ದಿವಸ, ಚಂದ್ರನು ವರದರಾಜನ ಮುಖದ ಹೋಲಿಕೆ ಪಡೆಯುತ್ತಾನೆ. ಆಮೇಲೆ ಟನದಿನವೂ ಕ್ರಮವಾಗಿ ಕ್ಷೀಣಿಸುತ್ತಾನೆ. ಇದರಿಂದ ಲೋಕಕ್ಕೆ ಅವನು ಬೋಧಿಸುವುದೇನೆಂದರೆ ಅನೀತಿಯಿಂದ ಗಳಿಸಿದ ಸಂಪತ್ತು ಬೇಗನೆ ಕ್ಷೀಣಿಸುತ್ತದೆ ಎಂದು. ಏಕೆಂದರೆ ಸೂರ್ಯನು ಆ ಸಂಪತ್ತನ್ನು ಕಮಲಗಳಿಂದ ಕದ್ದಿದ್ದಾನೆ. ಕದ್ದ ಮಾಲನ್ನು ಪಡೆದ ಚಂದ್ರನು ಎಷ್ಟು ಕಾಲ ಕಾಂತಿಪೂರ್ಣನಾಗಿರಲು ಸಾಧ್ಯ ? ಇಲ್ಲಿ ಅಸದರ್ಥದ ಬೋಧನೆಯನ್ನು ಚಂದ್ರನಲ್ಲಿ ಆರೋಪಿಸಿರುವುದರಿಂದ ನಿದರ್ಶನಾಲಂಕಾರ. ಅಪರಾಂ ಬೋಧನಂ ಪ್ರಾಹುಃ ಕ್ರಿಯಯಾಸತ್‌ಸದರ್ಥಯೋಃ ಎಂದು ತೃತೀಯ ಪ್ರಕಾರದ ನಿದರ್ಶನೆಯ ಲಕ್ಷಣ.

ದೃಗ್ಭ್ಯಾಂ ಮುಕುಂದ ಮೃಗಲೋಚನಕೋಮಲಾಭ್ಯಾಂ
ಜಾತಾಧಿಕದ್ಯುತಿ ವಿಲೋಕ್ಯ ತವಾನನಾಬ್ಜಮ್ ।
ಮನ್ಯೇ ಸ್ವಮಂಡಲಮಿತೋಽಪ್ಯಧಿಕಂ ವಿಧಿತ್ಸು-
ಸ್ತಸ್ಮಿನ್ ಬಿಭರ್ತಿ ಮೃಗಮೇವ ಜಡಃ ಸಿತಾಂಶುಃ ॥ ೮೯ ॥

**ಅನುವಾದ** : ಮುಕುಂದನೆನಿಸಿದ ವರದರಾಜ, ಜಿಂಕೆಯ ಕಣ್ಣುಗಳಂತೆ ಸುಂದರವಾದ ಕಣ್ಣುಗಳಿಂದ ಹೆಚ್ಚಿನ ಕಾಂತಿಯನ್ನು ಹೊಂದಿದ ನಿನ್ನ ಮುಖಕಮಲವನ್ನು ನೋಡಿದ ದಡ್ಡ ಚಂದ್ರನು ತನ್ನ ಬಿಂಬವನ್ನು ಇನ್ನೂ ಹೆಚ್ಚು ಕಾಂತಿಯುತವಾಗಿ ಮಾಡಿಕೊಳ್ಳಲು ಇಷ್ಟಪಟ್ಟು, ಜಿಂಕೆಯನ್ನೇ ತನ್ನ ಮಂಡಲದಲ್ಲಿ ಧರಿಸಿರುವನೆಂದು ಭಾವಿಸಿದ್ದೇನೆ.

**ವಿವರಣೆ** : ಚಂದ್ರನಲ್ಲಿ ಕಪ್ಪಾಗಿ ಕಾಣುವ ಕಳಂಕವು ಜಿಂಕೆಯ ಆಕಾರಕ್ಕೆ ಹೋಲುವುದರಿಂದ, ಚಂದ್ರನು ಜಿಂಕೆಯನ್ನು ಧರಿಸಿದ್ದಾನೆ ಎನ್ನುತ್ತಾರೆ. ಇದನ್ನು ಆಧಾರವಾಗಿಟ್ಟುಕೊಂಡು ಅದರ ಕಾರಣವನ್ನು ಕವಿ

ಉತ್ಪ್ರೇಕ್ಷಿಸಿದ್ದಾನೆ. ಜಿಂಕೆಯ ಕಣ್ಣುಗಳನ್ನು ಹೋಲುವ ಕಣ್ಣುಗಳನ್ನುಳ್ಳ ವರದರಾಜನ ಮುಖ ಅಷ್ಟು ಚೆನ್ನಾಗಿ ಕಾಣುವುದಾದರೆ, ಇಡೀ ಜಿಂಕೆಯನ್ನು ಹೊಂದಿರುವ ನನ್ನ ಮುಖ ಇನ್ನೂ ಚೆನ್ನಾಗಿ ಕಾಣುವುದೆಂದು ಭಾವಿಸಿ ಚಂದ್ರನು ಜಿಂಕೆಯನ್ನು ತನ್ನಲ್ಲಿಟ್ಟುಕೊಂಡಿದ್ದಾನೆ. ಇದು ಚಂದ್ರನ ದಡ್ಡತನವೆಂದು ಕವಿ ಹೇಳಿದ್ದಾನೆ.

ಮಾಲಿನ್ಯಮಬ್ಜಶಶಿನೋರ್ಮಧುಲಿಟ್‌ಕಲಂಕೌ
ಧತ್ತೋ ಮುಖೇ ತು ತವ ದೃಕ್‌ತಿಲಕಾತ್ಮನಾಭಾಮ್ ।
ದೋಷಾವಿತಃ ಕ್ವಚನ ಮೇಲನತೋ ಗುಣತ್ವಂ
ವಕ್ತುರ್ಯಥೇಶ ವಚಸಿ ಭ್ರಮವಿಪ್ರಲಂಭೌ ॥ ೯೦ ॥

**ಅನುವಾದ :** ಜಗದೀಶ್ವರ, ಕಮಲ-ಚಂದ್ರ ಇವುಗಳಲ್ಲಿ ಭ್ರಮರ, ಕಳಂಕಗಳು ಮಾಲಿನ್ಯ, ಆದರೆ ನಿನ್ನ ಮುಖದಲ್ಲಿ ಅವೆರಡೂ ಒಟ್ಟಿಗೆ ಇದ್ದು ಕಣ್ಣು-ತಿಲಕಗಳ ರೂಪದಿಂದ ಶೋಭೆಯನ್ನು ಧರಿಸುತ್ತವೆ. ಕೆಲವು ಸ್ಥಳಗಳಲ್ಲಿ ಎರಡು ದೋಷಗಳು ಒಟ್ಟಿಗೆ ಸೇರಿದರೆ ಅವು ಗುಣವೇ ಆಗಿಬಿಡುತ್ತವೆ. ಹೇಗೆಂದರೆ ಭ್ರಮವಿಪ್ರಲಂಭಗಳು ವಕ್ತೃವಿನ ಮಾತಿನಲ್ಲಿ (ಒಟ್ಟಿಗೆ ಸೇರಿದಾಗ ಅವು ಪ್ರಾಮಾಣ್ಯವೆಂಬ ಗುಣವನ್ನು ಪಡೆಯುವುದಲ್ಲವೇ ? )

**ವಿವರಣೆ :** ಕಮಲದಲ್ಲಿ ಕುಳಿತ ಕಪ್ಪು ದುಂಬಿಯೂ, ಚಂದ್ರನಲ್ಲಿರುವ ಕಳಂಕವೂ ಮಾಲಿನ್ಯಕ್ಕೆ (ಕೊಳಕಿಗೆ) ಉದಾಹರಣೆ. ಅವೆರಡೂ ಕ್ರಮವಾಗಿ ಕಣ್ಣು ಹಾಗೂ ತಿಲಕದ ರೂಪದಲ್ಲಿ ವರದರಾಜನ ಮುಖದಲ್ಲಿ ಸೇರುತ್ತವೆ. ಆಗ ಅವು ಹೆಚ್ಚಿನ ಕಾಂತಿಯನ್ನು ಪಡೆದು ಗುಣವಾಗಿ ಪರಿಣಮಿಸುತ್ತವೆ. ಇದರಿಂದ ಎರಡು ದೋಷಗಳು ಒಟ್ಟಿಗೆ ಸೇರಿದಾಗ ಅವು ಗುಣವೇ ಆಗುವುದೆಂದು ತಿಳಿದುಕೊಳ್ಳಬಹುದು. ಉದಾಹರಣೆಗೆ - ಮಾತನಾಡುವವನಲ್ಲಿ ಭ್ರಮ (ತಪ್ಪು ತಿಳುವಳಿಕೆ ಅಥವಾ ಭ್ರಾಂತಿ) ಒಂದು ದೋಷ. ಹಾಗೆಯೇ ವಿಪ್ರಲಂಭಕತ್ವವೂ (ಮೋಸಮಾಡಬೇಕೆಂಬ ಬುದ್ಧಿಯೂ) ಒಂದು ದೋಷ. ಇವೆರಡೂ ಒಬ್ಬನಲ್ಲಿ ಸೇರಿದಾಗ ಅವನ ಮಾತು

ಪ್ರಮಾಣವಾಗುವುದರಿಂದ ಅವು ಗುಣತ್ವವನ್ನೇ ಪಡೆದುಕೊಂಡಂತೆ ಆಯಿತು. ಮನೆಯಲ್ಲಿ ವಸ್ತುತಃ ದೇವದತ್ತನಿದ್ದಾಗ, ಅವನು ಅಲ್ಲಿ ಇಲ್ಲ ಎಂಬ ಭ್ರಾಂತಿಯು ಒಬ್ಬ ವಕ್ತೃವಿಗೆ ಇದೆ ಎಂದುಕೊಳ್ಳೋಣ. ಅವನು ವಂಚಕನಾಗಿ ಜನರನ್ನು ಮೋಸಗೊಳಿಸುವೆನೆಂಬ ಬುದ್ಧಿಯಿಂದ ದೇವದತ್ತ ಮನೆಯಲ್ಲಿ ಇದ್ದಾನೆ ಎಂದು ಹೇಳುತ್ತಾನೆ. ಅವನ ವಾಕ್ಯ ಆಗ ಪ್ರಮಾಣವೇ ಆಗುತ್ತದೆ ಎಂದು ಇದನ್ನು ಅರ್ಥಮಾಡಿಕೊಳ್ಳಬೇಕು. ಇಲ್ಲಿ ವಿಶೇಷವಾಕ್ಯ ಸಾಮಾನ್ಯವಾಕ್ಯ ಮತ್ತೆ ವಿಶೇಷವಾಕ್ಯಗಳನ್ನು ಸಮರ್ಥ್ಯಸಮರ್ಥಕ ಭಾವದಲ್ಲಿ ಬಳಸಿರುವುದರಿಂದ ವಿಕಸ್ವರಾಲಂಕಾರ. ಯಸ್ಮಿನ್ ವಿಶೇಷಸಾಮಾನ್ಯ ವಿಶೇಷಾಃ ಸ ವಿಕಸ್ವರಃ ಎಂದು ಅದರ ಲಕ್ಷಣ.

**ಆಮೋದಕಾಂತಿಭೃದಹರ್ನಿಶಮೇಕರೂಪ–**
**ಮಾಸೇವಿತಂ ದ್ವಿಜಗಣೈರ್ದಿವಿಷದ್ಗಣೈಶ್ಚ ।**
**ಅಂಕಾಧಿರೂಢ ಸಹಜಶ್ರಿ ಮುಖಂ ತ್ವದೀಯಂ**
**ಶಂಕಾಮಹೇ ವರದ ಸಂಹತಮಬ್ಜಯುಗ್ಮಮ್ ॥ ೯೦ ॥**

**ಅನುವಾದ :** ವರದ, ಸುಗಂಧ-ಕಾಂತಿಗಳೆರಡನ್ನೂ ಹೊಂದಿರುವ, ಹಗಲು ರಾತ್ರಿಗಳೆರಡರಲ್ಲೂ ಸಮಾನರೂಪವನ್ನುಳ್ಳ, ದ್ವಿಜಗಣಗಳಿಂದಲೂ ದೇವತಾಸಮೂಹದಿಂದಲೂ ಸೇವಿತವಾದ, ಅಂಕಾಧಿರೂಢವಾದ ಸಹಜ ಕಾಂತಿಯುಳ್ಳ ನಿನ್ನ ಮುಖವನ್ನು ಪದ್ಮ-ಚಂದ್ರರ ಒಟ್ಟುಗೂಡಿದ ಜೋಡಿಯೆಂದು ಊಹಿಸುತ್ತೇನೆ.

**ವಿವರಣೆ :** ವರದರಾಜಸ್ವಾಮಿಯ ಮುಖದಲ್ಲಿ ಪದ್ಮ ಮತ್ತು ಚಂದ್ರರ ಗುಣಗಳು ಒಟ್ಟಾಗಿ ಕಾಣುವುದರಿಂದ ಅವೆರಡೂ ಒಟ್ಟಾಗಿ ಸೇರಿ ವರದರಾಜನ ಮುಖವಾಗಿದೆಯೆಂದು ಕವಿ ಉತ್ಪ್ರೇಕ್ಷಿಸಿದ್ದಾನೆ. ಪದ್ಮದಲ್ಲಿ ಆಮೋದ (ಪರಿಮಳ) ಇದೆ, ಕಾಂತಿಯಿಲ್ಲ. ಚಂದ್ರನಲ್ಲಿ ಕಾಂತಿ (ಬೆಳದಿಂಗಳು) ಉಂಟು, ಆಮೋದ ಇಲ್ಲ. ವರದರಾಜನ ಮುಖದಲ್ಲಿ ಆಮೋದ ಕಾಂತಿಗಳೆರಡೂ ಉಂಟು. ಪದ್ಮ ಹಗಲಿನಲ್ಲಿ ಅರಳುತ್ತದೆ, ರಾತ್ರಿ

ಮುಚ್ಚಿಕೊಳ್ಳುತ್ತದೆ. ಚಂದ್ರ ರಾತ್ರಿ ಹೊಳೆಯುತ್ತಾನೆ, ಹಗಲು ಮಂಕಾಗುತ್ತಾನೆ. ಆದರೆ ವರದರಾಜನ ಮುಖ ಹಗಲಿನಲ್ಲೂ ಇರುಳಲ್ಲೂ ಸಮಾನವಾಗಿ ಕಾಂತಿಯುತವಾಗುತ್ತದೆ. ದ್ವಿಜಗಣಗಳು (ಹಂಸ ಮುಂತಾದ ಹಕ್ಕಿಗಳು) ಪದ್ಮವನ್ನೂ, ದೇವಗಣಗಳು ಚಂದ್ರನನ್ನೂ ಆಶ್ರಯಿಸುತ್ತವೆ. ವರದರಾಜನ ಮುಖವನ್ನು ದ್ವಿಜಗಣಗಳೂ (ಬ್ರಾಹ್ಮಣ ಸಮೂಹಗಳು) ದೇವಗಣಗಳೂ ಆಶ್ರಯಿಸುತ್ತವೆ. ಪದ್ಮದಲ್ಲಿ ಲಕ್ಷ್ಮಿಯು ಕುಳಿತಿರುತ್ತಾಳೆ, ಚಂದ್ರನಿಗೆ ಲಕ್ಷ್ಮಿ ಸಹಜೆ (ಸಹೋದರಿ). ಪರಮಾತ್ಮ ಮುಖವಾದರೋ ಅಂಕಾಧಿರೂಢಸಹಜಶ್ರೀ (ಪೂರ್ಣವಾಗಿ ತುಂಬಿರುವ ಸಹಜ ಸೌಂದರ್ಯ ವನ್ನುಳ್ಳದ್ದು). ಈ ಕಾರಣಗಳಿಂದ ವರದರಾಜನ ಮುಖ ಒಟ್ಟಿಗೆ ಸೇರಿದ ಪದ್ಮ-ಚಂದ್ರರ ಯುಗ್ಮ ಎಂದು ಭಾವಿಸಬಹುದೆಂದು ಕವಿಯ ಆಶಯ. ಅಬ್ಜಂ ಎಂದರೆ ಕಮಲ, ಅಬ್ಜಃ ಎಂದರೆ ಚಂದ್ರ ಎಂಬ ಶ್ಲೇಷವನ್ನು ಇಲ್ಲಿ ಗಮನಿಸಬೇಕು. ಉತ್ಪ್ರೇಕ್ಷಾಲಂಕಾರ.

**ಬಿಂಬಸ್ತ್ವಾಯಮಧರಃ ಪ್ರತಿಬಿಂಬನೇನ**
**ಯುಕ್ತಂ ಸದಾ ಯುವತಿಮಾನಸದರ್ಪಣೇಷು ।**
**ಬಿಂಬಾಧರಃ ಕವಿಭಿರೀಶ್ವರ ವರ್ಣ್ಯಸೇ ತ್ವ-**
**ಮೇತಾವತೈವ, ನ ತು ತುಚ್ಛಫಲೋಪಮಾನಾತ್ ॥ ೯೨ ॥**

**ಅನುವಾದ :** ಜಗದೀಶ್ವರ ವರದರಾಜ, ಯುವತಿಯರ ಮನಸ್ಸುಗಳೆಂಬ ಕನ್ನಡಿಗಳಲ್ಲಿ ಸದಾವಾಗಲೂ ಪ್ರತಿಬಿಂಬಿತವಾಗುತ್ತಿರುವುದರಿಂದ ನಿನ್ನ ತುಟಿಯು 'ಬಿಂಬ' ಎಂಬುದು ಉಚಿತವಾಗಿದೆ. ಇದನ್ನು ಇಟ್ಟುಕೊಂಡು ಕವಿಗಳಿಂದ ನೀನು 'ಬಿಂಬಾಧರ' ಎಂದು ವರ್ಣಿಸಲ್ಪಡುವೆ. ಅದಕ್ಕೆ ಕಾರಣ ತುಚ್ಛವಾದ ತೊಂಡೆಹಣ್ಣಿನೊಡನೆ ಉಪಮಿಸುವುದಂತೂ ಅಲ್ಲ.

**ವಿವರಣೆ :** ಕವಿಗಳು ವರದರಾಜನನ್ನು ಬಿಂಬಾಧರ ಎಂದು ಕರೆಯುತ್ತಾರೆ. ಬಿಂಬ ಎಂದರೆ ತೊಂಡೆಹಣ್ಣು ಎಂಬ ಅರ್ಥವಿದೆ. ಆದರೆ ಈ ಕವಿಯ ಪ್ರಕಾರ ವರದರಾಜನ ತುಟಿಯು ಯುವತಿಯರ ಹೃದಯ ದರ್ಪಣದಲ್ಲಿ ಪ್ರತಿಬಿಂಬಿತವಾಗಿರುವುದರಿಂದ ತಾನು ಬಿಂಬವಾಗುತ್ತದೆ. ಬಿಂಬರೂಪವಾದ

ಅಧರ ಎಂದು ಅದರ ಅರ್ಥವೇ ಹೊರತು, ಬಿಂಬಫಲದಂಥ ಅಥು .... ಅರ್ಥ ಸರಿಯಲ್ಲ. ಪರಮಾತ್ಮನ ತುಟಿಗೆ ತುಚ್ಛವಾದ ಯಾವುದೋ ಹಣ್ಣನ್ನು ಉಪಮಾನವಾಗಿ ಕೊಡುವುದು ಅನುಚಿತ ಎಂದು ಇಲ್ಲಿ ಕವಿ ಹೇಳಿದ್ದಾನೆ.

ವಿದ್ಯಾಮಯೇಷು ತವ ನಿಃಶ್ವಸಿತೇಷ್ವಪೂರ್ವಂ
ವಿದ್ಯಾವಿಶೇಷಮಿವ ಶಿಕ್ಷಿತುಮಂತರಾತ್ಮನ್ ।
ವಾಣ್ಯಾಃ ಸದಾ ತವ ಮುಖಾಂಬುರುಹೇ ವಸಂತ್ಯಾಃ
ಕಾಯಪ್ರಭೇವ ಲಸತಿ ಸ್ಮಿತಚಂದ್ರಿಕಾ ತೇ ॥ ೯೩ ॥

**ಅನುವಾದ** : ಜಗದಂತರಾತ್ಮನಾದ ವರದರಾಜ, ನಿನ್ನ ನಿಃಶ್ವಾಸ ರೂಪವಾದ ವೇದಗಳಲ್ಲಿ ಅಪೂರ್ವವಾದ ವಿಶೇಷ ವಿದ್ಯೆಯನ್ನು ಕಲಿಯಲು ನಿನ್ನ ಮುಖಕಮಲದಲ್ಲಿ ಯಾವಾಗಲೂ ವಾಸಿಸುತ್ತಿರುವ ವಾಣಿಯ ಶರೀರ ಕಾಂತಿಯಂತೆ ನಿನ್ನ ಮುಗುಳುನಗೆಯ ಬೆಳದಿಂಗಳು ಕಂಗೊಳಿಸುತ್ತದೆ.

**ವಿವರಣೆ** : ಸರಸ್ವತಿ ಶುಭ್ರವಾದ ಬಿಳಿಯ ಕಾಂತಿಯನ್ನು ಹೊಂದಿರುತ್ತಾಳೆ. ಅವಳು ವರದರಾಜನ ಮುಖಕಮಲದಲ್ಲಿ ವಾಸಿಸುತ್ತಾಳೆಂದು ಕವಿಯ ಕಲ್ಪನೆ. ಅದಕ್ಕೆ ಕಾರಣವೇನು ? ಪರಮಾತ್ಮನ ನಿಃಶ್ವಾಸರೂಪವಾಗಿ ಋಗ್ವೇದ, ಯಜುರ್ವೇದ ಮುಂತಾದ ಜ್ಞಾನವು ಪ್ರವಹಿಸಿತೆಂದು "ಯಸ್ಯ ನಿಃಶ್ವಸಿತಂ ವೇದಾಃ" ಇತ್ಯಾದಿ ಪ್ರಮಾಣವಾಕ್ಯಗಳು ತಿಳಿಸುತ್ತವೆ. ಆ ವೇದಗಳಲ್ಲಿ ಅಪೂರ್ವ ವಿದ್ಯಾವಿಶೇಷವನ್ನು ಕಲಿತುಕೊಳ್ಳಲು ಸರಸ್ವತಿ ಅಲ್ಲಿ ವಾಸಿಸುತ್ತಾಳೆ. ಅವಳ ಶುಭ್ರದೇಹಕಾಂತಿಯೇ ವರದರಾಜನ ಮುಗುಳು ನಗೆಯೆಂಬ ಬೆಳದಿಂಗಳಿನ ರೂಪದಿಂದ ಕಾಣುತ್ತಿದೆ ಎಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ತಾಪತ್ರಯೌಷಧವರಸ್ಯ ತವ ಸ್ಮಿತಸ್ಯ
ನಿಃಶ್ವಾಸಮಂದಮರುತಾ ನಿಬುಸೀಕೃತಸ್ಯ ।
ಏತೇ ಕಡಂಗರಚಯಾ ಇವ ವಿಪ್ರಕೀರ್ಣಾ
ಜ್ಯೈತ್ಸ್ನಾತ್ಮಕಸ್ಯ ಕಿರಣಾ ಜಗತಿ ಭ್ರಮಂತಿ ॥ ೯೪ ॥

**ಅನುವಾದ** : ಭಗವನ್ ವರದರಾಜ, ನಿನ್ನ ಮುಗುಳುನಗೆಯು

ತಾಪತ್ರಯಗಳಿಗೆಲ್ಲಾ ಶ್ರೇಷ್ಠ ಔಷಧವಾಗಿದೆ. ಆ ಮುಗುಳುನಗೆಯ ಹೊಟ್ಟು-ತೌಡುಗಳನ್ನು ನಿಶ್ವಾಸದ ಮೃದುವಾದ ಗಾಳಿಯು ಬೇರ್ಪಡಿಸುತ್ತದೆ. ಹಾಗೆ ಬೇರೆಯಾಗಿ ದೂರ ಹಾರಿಹೋದ ಹೊಟ್ಟುಗಳೇ ಚಂದ್ರನ ಕಿರಣಗಳ ರೂಪದಲ್ಲಿ ಜಗತ್ತಿನಲ್ಲೆಲ್ಲಾ ಸಂಚರಿಸುತ್ತಿವೆ.

**ವಿವರಣೆ :** ಪರಮಾತ್ಮನು ನಕ್ಕರೆ ಜಗತ್ತಿನ ತಾಪತ್ರಯ – ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕವೆಂಬ ಮೂರು ತಾಪಗಳು – ಕೊನೆಗಾಣುವುದರಿಂದ ಮುಗುಳುನಗೆಯೇ ತಾಪತ್ರಯಕ್ಕೆ ಶ್ರೇಷ್ಠ ಔಷಧ ಎಂದಿಲ್ಲಿ ಹೇಳಿದೆ. ಧಾನ್ಯವನ್ನು ಗಾಳಿಗೆ ಒಡ್ಡಿದಾಗ ಅದರ ತೌಡು ಹೊಟ್ಟುಗಳು ಹೇಗೆ ಹಾರಿಸುತ್ತಲೂ ಹೋಗುವುವೋ ಹಾಗೆ ಪರಮಾತ್ಮನು ನಿಶ್ವಾಸ ಮಾಡಿದಾಗ ಅವನ ಮುಗುಳುನಗೆಯ ಕೆಲವು ಹೊಟ್ಟುಗಳು ಹಾರಿಹೋಗಿ ಜಗತ್ತಿನಲ್ಲಿ ಸಂಚರಿಸುತ್ತವೆ. ಅವೇ ಚಂದ್ರಕಿರಣಗಳು.

ಹೊಟ್ಟಿಗಿಂತಲೂ ಧಾನ್ಯವು ತುಂಬಾ ರುಚಿಕರವೂ ಮುಖ್ಯವಾದುದೂ ಆದ್ದರಿಂದ ವರದರಾಜನ ಮುಗುಳುನಗೆಯು ಚಂದ್ರನ ಕಿರಣಗಳಿಗಿಂತ ತುಂಬಾ ಹೆಚ್ಚು ಕೋಮಲವೂ ಶೀತಲವೂ ಆಗಿರುತ್ತದೆ ಎಂದು ಇಲ್ಲಿ ಧ್ವನಿತಾರ್ಥ. ಅಪ್ರಸ್ತುತವಾದ ಚಂದ್ರಕಿರಣಗಳನ್ನು ಕಡಂಗರಚಯವೆಂದು ವರ್ಣಿಸಿದ್ದರಿಂದ ಪ್ರಸ್ತುತವಾದ ವರದರಾಜನ ಸ್ಮಿತದ ಉತ್ಕರ್ಷ ತೋರುವುದರಿಂದ ಅಪ್ರಸ್ತುತಪ್ರಶಂಸಾಲಂಕಾರ. ಇದು ಉಪಮಾಲಂಕಾರ ದೊಡನೆ ಸೇರಿದೆ.

**ಸಿದ್ಧೌಷಧಂ ಜಯತಿ ತೇಽಧರರತ್ನಪಾತ್ರೇ**
**ತಾಪತ್ರಯೀ ಝಟಿತಿ ಮುಂಚತಿ ಯೇನ ಸಿಕ್ತಮ್ ।**
**ಮನ್ಯೇ ತುಷಾರಕಿರಣಂ ಗುಣಲೇಶಯೋಗಾ-**
**ದಸ್ಯೈವ ವಾರಿಜವಿಲೋಚನ ಕಲ್ಕಪುಂಜಮ್ ॥ ೯೫ ॥**

**ಅನುವಾದ :** ಕಮಲಲೋಚನ ವರದರಾಜ, ನಿನ್ನ ತುಟಿಗಳೆಂಬ ರತ್ನ ಪಾತ್ರೆಯಲ್ಲಿ ಸಿದ್ಧೌಷಧವು ವಿರಾಜಿಸುತ್ತಿದೆ. ಅದರಿಂದ ನೆನೆದ ಜೀವವು ತಾಪತ್ರಯದಿಂದ ದೂರವಾಗುತ್ತದೆ. ಆ ಸಿದ್ಧೌಷಧದ ಸ್ವಲ್ಪಗುಣವನ್ನು

ಹೊಂದಿರುವ ಕಾರಣದಿಂದ ಚಂದ್ರನು ಅದರ ಹಿಂಡಿಯ ಉಂಡೆ ಎಂದು ಭಾವಿಸುತ್ತೇನೆ.

**ವಿವರಣೆ** : ಪರಮಾತ್ಮನ ತುಟಿಗಳಲ್ಲಿ ಕಾಣುವ ಮಂದಹಾಸವೇ ತಾಪತ್ರಯವೆಂಬ ರೋಗಕ್ಕೆ ಸಿದ್ಧೌಷಧ. ಆ ಮಂದಹಾಸದಿಂದ ನೆನೆದ ಯಾವ ವಸ್ತುವಾದರೂ ಸರಿ, ಅದನ್ನು ಬಿಟ್ಟು ತಾಪತ್ರಯ ದೂರ ಓಡಿ ಹೋಗುತ್ತದೆ. ತಾಪತ್ರಯದಲ್ಲಿ ಒಂದಾದ ಆಧಿಭೌತಿಕ ತಾಪವನ್ನು ಸ್ವಲ್ಪಮಟ್ಟಿಗೆ ನೀಗಿಸುವ ಚಂದ್ರನು, ವರದರಾಜನ ತುಟಿಗಳಲ್ಲಿರುವ ಸಿದ್ಧೌಷಧದ ಹಿಂಡಿಯ ಉಂಡೆಯಂತೆ ಇದ್ದಾನೆಂದು ಕವಿ ಉತ್ಪ್ರೇಕ್ಷಿಸಿದ್ದಾನೆ.

ಹಿಂಡಿಯಲ್ಲಿ ತೈಲದ ಅಂಶ ಸ್ವಲ್ಪಮಾತ್ರ ಇರುತ್ತದೆ. ಸಾರವನ್ನು ತೆಗೆದ ಮೇಲೆ ಉಳಿದ ಪದಾರ್ಥ ಹಿಂಡಿ. ಅಂಥ ಹಿಂಡಿಯ ಉಂಡೆಯಾದ ಚಂದ್ರನೇ ಇಷ್ಟು ಆಹ್ಲಾದಕನಾಗಿರುವಾಗ, ಸಾರರೂಪವಾದ ವರದರಾಜನ ಮಂದಹಾಸ ಇನ್ನೆಷ್ಟು ಆಹ್ಲಾದಕರ ಎಂದು ಇಲ್ಲಿ ಸೂಚಿತವಾಗುತ್ತದೆ.

**ಆತನ್ವತಾಮವಯವೇಷು ಗತಾಗತಾನಿ**
**ಯುಕ್ತಾತ್ಮನಾಂ ವರದ ಯೌವತಚಕ್ಷುಷಾಂ ಚ ।**
**ವಿಶ್ರಾಂತಿಭೂರ್ವಿಧುಕರಪ್ರಕರಾವದಾತಾ**
**ಮಂದಸ್ಮಿತಚ್ಛವಿರಿಯಂ ತವ ಮಾಂ ಪುನಾತು ॥ ೯೬ ॥**

**ಅನುವಾದ** : ವರದರಾಜ, ಯೋಗಿಗಳ ಮನಸ್ಸುಗಳು ಮತ್ತು ಯುವತಿಯರ ಕಣ್ಣುಗಳು ನಿನ್ನ ಅವಯವಗಳಲ್ಲಿ ಹಿಂದೆಮುಂದೆ ಸಂಚರಿಸುತ್ತವೆ. ಅವುಗಳಿಗೆಲ್ಲಾ ಚಂದ್ರಕಿರಣಪುಂಜದಂತೆ ಬಿಳುಪಾದ ನಿನ್ನ ಮಂದಹಾಸಕಾಂತಿಯೇ ವಿಶ್ರಾಂತಿಧಾಮವಾಗಿದೆ. ಅದು ನನ್ನನ್ನು ಕಾಪಾಡಲಿ.

**ವಿವರಣೆ** : ಯೋಗಿಗಳು ಯಾವಾಗಲೂ ಭಗವಂತನ ಧ್ಯಾನದಲ್ಲಿ ಲೀನವಾಗಿರುವುದರಿಂದ ಅವರ ಮನಸ್ಸು ವರದರಾಜನ ಬೇರೆ ಬೇರೆ ಅವಯವಗಳಲ್ಲಿ ಸಂಚರಿಸುತ್ತಿರುತ್ತದೆ. ಯುವತಿಯರ ಕಣ್ಣುಗಳೂ ಕೂಡ ವರದರಾಜನ ಸೌಂದರ್ಯವನ್ನು ನೋಡುವುದರಲ್ಲಿ ಆಸಕ್ತವಾಗಿ ಅವನ ಅಂಗಗಳಲ್ಲಿ ಸಂಚರಿಸುತ್ತವೆ. ಆ ಮನಸ್ಸುಗಳೂ ಕಣ್ಣುಗಳೂ ವಿಶ್ರಮಿಸುವುದು

ಭಗವಂತನ ಮಂದಹಾಸದಲ್ಲಿ. ಅದು ಚಂದ್ರಕಿರಣಗಳ ರಾಶಿಯಂತೆ ಬಿಳುಪಾಗಿರುತ್ತದೆ. ಅದು ನನ್ನನ್ನು ಕಾಪಾಡಲಿ ಎಂದು ಕವಿ ಇಲಿ ಪ್ರಾರ್ಥಿಸಿದ್ದಾನೆ. ಉಪಮಾಲಂಕಾರ.

**ನಿಃಶ್ವಾಸಮಂದಮಲಯಾನಿಲಕಂದಲೇನ**
**ನಿರ್ಹಾರಿಣಾ ಬಹುತರೇಣ ಚ ಸೌರಭೇಣ ।**
**ನಾಸಾಪುಟೌ ನಲಿನಲೋಚನ ತೇ ಮನೋಜ್ಞೌ**
**ಮನ್ಯೇ ಸದೈವ ಮಧುಮಾಧವಯೋರ್ನಿವಾಸೌ ॥ ೯೭ ॥**

**ಅನುವಾದ** : ಕಮಲಾಕ್ಷ ವರದರಾಜ, ನಿಃಶ್ವಾಸದ ಮಂದಮಾರುತದ ಅಂಕುರದಿಂದಲೂ, ಆಕರ್ಷಕವೂ ಹೆಚ್ಚಿನ ಪ್ರಮಾಣದ್ದೂ ಆದ ಪರಿಮಳದಿಂದಲೂ ನಿನ್ನ ಮೂಗಿನ ಹೊಳ್ಳೆಗಳು ಸುಂದರವಾಗಿವೆ. ಅವು ಸದಾ ಚೈತ್ರ-ವೈಶಾಖ ಮಾಸಗಳ ನಿವಾಸವೆಂಥು ಭಾವಿಸುತ್ತೇನೆ.

**ವಿವರಣೆ** : ಮಧುಶಬ್ದಕ್ಕೆ ಚೈತ್ರವೆಂದೂ, ಮಾಧವ ಶಬ್ದಕ್ಕೆ ವೈಶಾಖವೆಂದೂ ಅರ್ಥವನ್ನು ಕೋಶಗಳು ಹೇಳಿವೆ. ಮಲಯಾನಿಲವು ಚೈತ್ರಮಾಸದಲ್ಲಿ ದಕ್ಷಿಣ ದಿಕ್ಕಿನಿಂದ ಬೀಸುತ್ತದೆ. ವೈಶಾಖಮಾಸದಲ್ಲಿ ಎಲ್ಲ ಮರಗಳೂ ಹೂ ಬಿಡುವುದರಿಂದ ಪರಿಮಳವು ಮನೋಜ್ಞವಾಗಿ ಹರಡುತ್ತದೆ. ವರದರಾಜನ ಮೂಗಿನ ಹೊಳ್ಳೆಗಳಿಂದ ಹೊರಡುವ ನಿಃಶ್ವಾಸವೇ ಮಲಯಾನಿಲ, ಅದರ ಸೌರಭವೇ ಪುಷ್ಪಪರಿಮಳ ಎಂಬ ಅತಿಶಯೋಕ್ತಿಯನ್ನು ಕವಿ ಇಲ್ಲಿ ಬಳಸಿದ್ದಾನೆ. ಉತ್ಪ್ರೇಕ್ಷಾಲಂಕಾರ.

**ಸಂಚಾರಶಾಲಿ ತವ ನಿಃಶ್ವಸಿತೇ ಸಮಾಪ್ತ-**
**ವೇದೇತಿಹಾಸವಪುಷಿ ದ್ವಿಪಶೈಲನಾಥ ।**
**ನಾಭೀಸರೋರುಹನವಾರುಣಮಂಡಲೇ ಚ**
**ಮನ್ಯೇ ಮಧುವ್ರತಕುಲಂ ಮಧುವಿದ್ಯಯೋಕ್ತಮ್ ॥ ೯೮ ॥**

**ಅನುವಾದ** : ಗಜಶೈಲದ ಸ್ವಾಮಿ ವರದರಾಜ, ಸಮಸ್ತ ವೇದಗಳೂ

ಇತಿಹಾಸಗಳೂ ದೇಹವಾಗಿರುವ ನಿನ್ನ ನಿಃಶ್ವಾಸದಲ್ಲೂ, ನಾಭಿಕಮಲವೆಂಬ ಹೊಸ ಸೂರ್ಯಮಂಡಲದಲ್ಲೂ ಸಂಚರಿಸುತ್ತಿರುವ ಜೇನುಹುಳಗಳ ಸಮೂಹವು ಮಧುವಿದ್ಯೆಯಿಂದ ವರ್ಣಿಸಲ್ಪಟ್ಟ ಮಧುವ್ರತಕುಲವೆಂದು ತಿಳಿಯುತ್ತೇನೆ.

**ವಿವರಣೆ** : ಛಾಂದೋಗ್ಯೋಪನಿಷತ್ತಿನಲ್ಲಿ ಮಧುವಿದ್ಯೆಯನ್ನು ವರ್ಣಿಸಿದ್ದಾರೆ. ಜೇನುಹುಳಗಳು ನಾನಾ ಪುಷ್ಪಗಳಿಂದ ಮಧುವನ್ನು ಸಂಗ್ರಹಿಸಿ ತಮ್ಮ ಮಂಡಲದಲ್ಲಿ (ಗೂಡಿನಲ್ಲಿ) ಶೇಖರಿಸುತ್ತವೆ. ಆದಕ್ಕಾಗಿ ತಮ್ಮ ಗೂಡಿನಿಂದ ಹೂಗಳಿರುವ ಸ್ಥಳಕ್ಕೆ ಅನೇಕಬಾರಿ ಸಂಚರಿಸುತ್ತವೆ. ಪ್ರಕೃತದಲ್ಲಿ ಪರಮಾತ್ಮನ ನಿಃಶ್ವಸಿತವೇ ವೇದಾದಿಶಾಸ್ತ್ರಗಳಾದ್ದರಿಂದ ಅವು ಅನೇಕ ಪುಷ್ಪಗಳೆಂದು ಭಾವಿಸಲಾಗಿದೆ. ನಾಭಿಕಮಲವೇ ನವಾರುಣ ಮಂಡಲ. ಈ ಎರಡು ಸ್ಥಳಗಳ ಮಧ್ಯೆ ಓಡಾಡುವ ಮಧುವ್ರತಗಳು (ಜೇನು ಹುಳುಗಳು) ಮಧುವಿದ್ಯೆಯ ಸಂಕೇತಗಳು ಎಂಬ ಭಾವನೆಯಿಂದ ಈ ವರ್ಣನೆಯನ್ನು ಮಾಡಲಾಗಿದೆ.

**ದೇಹಾದ್ವದಂತಿ ಜನನಂ ಮುನಯಸ್ತಿಲಾನಾಂ**
**ದೇವೇಂದ್ರವಂದ್ಯಚರಣಾಂಬುಜ ತಾವಕೀನಾತ್ ।**
**ನಾರಾಯಣೈತದುಚಿತಂ ಪ್ರಕಟೀಕರೋತಿ**
**ನಾಸಾಭಿಧಾನಮಿಹ ದಿವ್ಯತಿಲಪ್ರಸೂನಮ್ ॥ ೯೯ ॥**

**ಅನುವಾದ** : ದೇವೇಂದ್ರನಿಂದಲೂ ನಮಸ್ಕೃತವಾದ ಪಾದಕಮಲವುಳ್ಳ ನಾರಾಯಣ, ಮುನಿಗಳು ನಿನ್ನ ದೇಹದಿಂದ ತಿಲಗಳ ಉತ್ಪತ್ತಿಯಾಯಿತೆಂದು ಹೇಳುತ್ತಾರೆ. ನಿನ್ನ ಮೂಗೆಂಬ ದಿವ್ಯ ತಿಲಪುಷ್ಪವು ಈ ಹೇಳಿಕೆ ಉಚಿತವೆಂದು ತೋರಿಸುತ್ತಿದೆ.

**ವಿವರಣೆ** : ಸುಂದರವಾದ ಮೂಗಿಗೆ ತಿಲಪುಷ್ಪವನ್ನು ಉಪಮೆಯಾಗಿ ಕೊಡುವುದು ಕವಿಸಂಪ್ರದಾಯ. ಋಷಿಗಳ ವಾಕ್ಯದಲ್ಲಿ ಪರಮಾತ್ಮನ ದೇಹದಿಂದ ತಿಲಗಳ ಉತ್ಪತ್ತಿಯಾಯಿತೆಂದು ಹೇಳಿದೆ. ಇವನ್ನು ಉಪಯೋಗಿಸಿ ಕವಿ ಈ ಪದ್ಯವನ್ನು ರಚಿಸಿದ್ದಾನೆ.

**ನೇತ್ರೇ ತವ ಕ್ವ ಭಗವನ್ ಕ್ವ ಚ ಪುಂಡರೀಕಂ**
**ಬ್ರೂತೇ ತಯೋಸ್ತದುಪಮಾನಮಥಾಪಿ ವೇದಃ ।**
**ಸರ್ವಾತ್ಮನಸ್ತವ ಸಮಾಧಿಕವಸ್ತ್ವಲಾಭಾ-**
**ದಾಕಾಶವತ್ ಸ ಖಲು ಸರ್ವಗತತ್ವಮಾಹ ॥ ೧೦೦ ॥**

**ಅನುವಾದ :** ಭಗವನ್, ನಿನ್ನ ಕಣ್ಣುಗಳೆಲ್ಲಿ, ಆ ಪದ್ಮವೆಲ್ಲಿ ? ಆದರೂ ವೇದವು ಅವುಗಳಿಗೆ ಅದನ್ನು ಉಪಮಾನವಾಗಿ ಹೇಳಿದೆ. ಸರ್ವಾತ್ಮನಾದ ನಿನಗೆ ಸಮಾನ ಅಥವಾ ಅದಿಕವಾದ ವಸ್ತು ಸಿಗದ ಕಾರಣ ಆ ವೇದವು ನಿನ್ನ ಸರ್ವವ್ಯಾಪಕತ್ವವನ್ನು ಆಕಾಶದಂತೆ ಎಂದು ಹೇಳಿಲ್ಲವೆ ?

**ವಿವರಣೆ :** "ಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ಶ್ರುತಿಯು ಪರಮಾತ್ಮನ ಕಣ್ಣುಗಳು ಪದ್ಮದಂತೆ ಎಂದು ಹೇಳುತ್ತದೆ. ಆದರೆ ಕಮಲಕ್ಕೂ ಪರಮಾತ್ಮನ ಕಣ್ಣುಗಳಿಗೂ ಎಲ್ಲಿಂದ ಹೋಲಿಕೆ ? ಪರಮಾತ್ಮ ಸರ್ವಾಂತರ್ಯಾಮಿ, ಸರ್ವವ್ಯಾಪಕ. ಅವನನ್ನು ವರ್ಣಿಸಲು ಹೊರಟಾಗ ಅವನಿಗೆ ಸಮಾನವಾದ ಅಥವಾ ಅಧಿಕವಾದ ವಸ್ತುವೇ ಇಲ್ಲ. ಈ ಕಾರಣದಿಂದ ಉಪಮಾನವೇ ಸಿಗುವುದಿಲ್ಲ. ವೇದವು ಯಾವುದೋ ಒಂದು ವಸ್ತುವನ್ನು ತೆಗೆದುಕೊಂಡು ಉಪಮಾನವಾಗಿ ಹೇಳುತ್ತದೆ. ಪರಮಾತ್ಮ ಸರ್ವಗತನೆಂದು ಹೇಳಲು ಆಕಾಶವನ್ನು ಉಪಮಾನವಾಗಿ ತೆಗೆದುಕೊಂಡಿದೆ. ಪ್ರತಿ ಬ್ರಹ್ಮಾಂಡದಲ್ಲಿ ಭಿನ್ನವಾದ ಆಕಾಶವೆಲ್ಲಿ ? ಎಲ್ಲ ಬ್ರಹ್ಮಾಂಡಗಳನ್ನು ತನ್ನೊಳಗೆ ಹೊಂದಿರುವ ಪರಮಾತ್ಮನೆಲ್ಲಿ ? ಈ ರೀತಿಯೇ ಕಣ್ಣುಗಳಿಗೂ ಕೊಟ್ಟಿರುವ ಪದ್ಮೋಪಮಾನವೆಂದು ತಿಳಿಯಬೇಕು. ಪೂರ್ವಾರ್ಧದಲ್ಲಿ ವಿಷಮಾಲಂಕಾರ. ವಿಷಮಂ ವರ್ಣ್ಯತೇ ಯತ್ರ ಘಟನಾನನುರೂಪಯೋಃ ಎಂದು ಅದರ ಲಕ್ಷಣ.

**ಸಾಮ್ಯಭ್ರಮಾದವಿನಯೇನ ಸಮುನ್ನತಸ್ಯ**
**ಸವ್ಯಂ ತವಾಕ್ಷಿ ಹರತಿ ಶ್ರಿಯಮಂಬುಜಸ್ಯ ।**
**ತಸ್ಯಾಪಿ ತಾಂ ಸಮಧಿಕಾಂ ತನುತೇ ಯದನ್ಯದ್**
**ದಾಕ್ಷಿಣ್ಯಮೇವ ದನುಜಾಹಿತ ತತ್ರ ಮೂಲಮ್ ॥ ೧೦೦ ॥**

**ಅನುವಾದ :** (ಪರಮಾತ್ಮನ ಕಣ್ಣಿನೊಂದಿಗೆ) ಸಾಮ್ಯ ತನಗಿದೆಯೆಂಬ

ಭ್ರಾಂತಿಯಿಂದ ತಲೆಯೆತ್ತಿ ನಿಂತ ಕಮಲದ ಅಗ್ಗಳಿಕೆಯನ್ನು ನಿನ್ನ ಎಡಗಣ್ಣು ಕಳೆದುಹಾಕುತ್ತದೆ. ಆ ಕಮಲಕ್ಕೆ ನಿನ್ನ ಇನ್ನೊಂದು ಕಣ್ಣು ಹೆಚ್ಚಿನ ಕಾಂತಿಯನ್ನು ಕೊಡುತ್ತದೆ. ರಾಕ್ಷಸರ ಶತ್ರುವಾದ ವರದರಾಜ, ಇದಕ್ಕೆ ಕಾರಣ ದಾಕ್ಷಿಣ್ಯವೇ ಇರಬೇಕು.

**ವಿವರಣೆ :** ಪರಮಾತ್ಮನ ಎಡಗಣ್ಣು ಚಂದ್ರ, ಬಲಗಣ್ಣು ಸೂರ್ಯ ಎಂದು ಶಾಸ್ತ್ರಗಳು ಹೇಳುತ್ತವೆ. ಚಂದ್ರನು ಕಮಲದ ಕಾಂತಿಯನ್ನು ಕಳೆದರೆ ಸೂರ್ಯನು ಅದನ್ನು ಅರಳಿಸಿ ಕಾಂತಿಯನ್ನು ತುಂಬುತ್ತಾನೆ. ಅದಕ್ಕೆ ಕಾರಣ ದಾಕ್ಷಿಣ್ಯ. ಇಲ್ಲಿ ದಾಕ್ಷಿಣ್ಯಶಬ್ದಕ್ಕೆ 'ಬಲಗಡೆ ಇರುವಿಕೆ' ಮತ್ತು 'ತಪ್ಪನ್ನು ಕ್ಷಮಿಸುವ ಗುಣ' ಎಂಬ ಎರಡು ಅರ್ಥಗಳೂ ವಿವಕ್ಷಿತ.

**ಪದ್ಮಾನುರಾಗಜುಷಿ ಲೋಹಿತಶುಕ್ಲಕೃಷ್ಣಾ-**
**ಮಾಸೇದುಷಿ ಪ್ರಕೃತಿಮಾದೃತಮೀನರೂಪೇ ।**
**ಶ್ರುತ್ಯಂತಭಾಸಿನಿ ಮದಾವಲಶೈಲನಾಥ-**
**ತ್ವಲ್ಲೋಚನೇ ತ್ವಯಿ ಚ ಭಾತಿ ನ ಮೇ ವಿಶೇಷಃ ॥ ೧೦೨ ॥**

**ಅನುವಾದ :** ಹಸ್ತಿಶೈಲನಾಥ ವರದರಾಜ, ಪದ್ಮಾನುರಾಗವನ್ನು ಹೊಂದಿರುವ, ಕೆಂಪು, ಬಿಳುಪು, ಕಪ್ಪುಗಳನ್ನು ಹೊಂದಿರುವ ಪ್ರಕೃತಿಯನ್ನು ಆಶ್ರಯಿಸಿದ, ಮೀನರೂಪವನ್ನು ಪಡೆದಿರುವ, ಶ್ರುತ್ಯಂತದಲ್ಲಿ ಹೊಳೆಯುವ ನಿನ್ನ ಕಣ್ಣಿಗೂ ನಿನಗೂ ಯಾವ ವ್ಯತ್ಯಾಸವೂ ನನಗೆ ತೋರುವುದಿಲ್ಲ.

**ವಿವರಣೆ :** ಇಲ್ಲಿ ಶ್ಲೇಷದಿಂದ ಪರಮಾತ್ಮನಿಗೂ ಅವನ ಕಣ್ಣಿಗೂ ಸಾಮ್ಯವನ್ನು ಸಾಧಿಸಲಾಗಿದೆ. ಪದ್ಮ = ಕಮಲ, ಪದ್ಮಾ = ಲಕ್ಷ್ಮೀ. ಪರಮಾತ್ಮನ ಕಣ್ಣಾದ ಸೂರ್ಯನು ಪದ್ಮದಲ್ಲಿ ಅನುರಾಗವನ್ನು ಹೊಂದಿದ್ದರೆ, ಹರಿಯು ಪದ್ಮೆಯಲ್ಲಿ (ಲಕ್ಷ್ಮಿಯಲ್ಲಿ) ಅನುರಾಗವನ್ನು ಹೊಂದಿದ್ದಾನೆ. ರಜಸ್ಸು (ಕೆಂಪು), ಸತ್ತ್ವ (ಬಿಳುಪು), ತಮಸ್ಸು (ಕಪ್ಪು) ಎಂಬ ಗುಣಗಳನ್ನುಳ್ಳ ಪ್ರಕೃತಿ ಪರಮಾತ್ಮನಲ್ಲಿದ್ದರೆ ಕೆಂಪು, ಬಿಳುಪು, ಕಪ್ಪು

ಎಂಬ ಬಣ್ಣಗಳ ಸ್ವಭಾವವು ಅವನ ಕಣ್ಣಿನಲ್ಲಿದೆ. ಪರಮಾತ್ಮನು ಮತ್ಸ್ಯಾವತಾರದಲ್ಲಿ ಮೀನರೂಪನಾಗಿದ್ದನು. ಕಣ್ಣು ಮೀನಿನ ಹಾಗೆ ದೀರ್ಘವಾಗಿರುವುದರಿಂದ ಅದೂ ಮೀನ ರೂಪ. ಶ್ರುತಿ ಶಬ್ದಕ್ಕೆ ಕಿವಿ, ವೇದ ಎಂಬ ಎರಡು ಅರ್ಥಗಳಿವೆ. ಪರಮಾತ್ಮನು ಶ್ರುತ್ಯಂತದಲ್ಲಿ (ವೇದಾಂತದಲ್ಲಿ) ಕಂಗೊಳಿಸುತ್ತಾನೆ. ಅವನ ಕಣ್ಣು ಶ್ರುತ್ಯಂತದಲ್ಲಿ (ಕಿವಿಯ ಸಮೀಪದಲ್ಲಿ) ಹೊಳೆಯುತ್ತದೆ. ಹೀಗೆ ಪರಮಾತ್ಮನಿಗೂ ಅವನ ಕಣ್ಣಿಗೂ ಯಾವ ಭೇದವೂ ಇಲ್ಲವೆಂದು ಕವಿ ಚಮತ್ಕಾರದಿಂದ ಹೇಳಿದ್ದಾನೆ.

**ಮುಕ್ತಃ ಪ್ರಜಾಪತಿರಯಂ ಮಮ ದರ್ಶನಾದಿ-**
**ತ್ಯನ್ಯಂ ವಿಧಾತುಮನಸಸ್ತವ ಭಾಲಜಾತಾ ।**
**ಘರ್ಮಾಂಬುಬಿಂದುತತಿರೇವ ಕಿರೀಟಮೂಲ**
**ಪ್ರತ್ಯುಪ್ತಮೌಕ್ತಿಕತತಿಚ್ಛಲತೋ ವಿಭಾತಿ ॥ ೧೦೩ ॥**

**ಅನುವಾದ :** ಈ ಬ್ರಹ್ಮನು ನನ್ನ ದರ್ಶನದಿಂದ ಮುಕ್ತನಾದನು ಎಂದು ಇನ್ನೊಬ್ಬ ಬ್ರಹ್ಮನನ್ನು ಸೃಷ್ಟಿಸಲು ಸಂಕಲ್ಪಿಸಿದ ನಿನ್ನ ಹಣೆಯಲ್ಲಿ ಹುಟ್ಟಿದ ಬೆವರಿನ ಹನಿಗಳ ಸಾಲು ಕಿರೀಟದ ಕೆಳಗೆ ಪೋಣಿಸಿದ ಮುತ್ತುಗಳ ಸಾಲಿನ ನೆಪದಿಂದ ಹೊಳೆಯುತ್ತಿದೆ.

**ವಿವರಣೆ :** ಮಹೋಪನಿಷತ್ತಿನಲ್ಲಿ ಪರಮಾತ್ಮನ ಬೆವರಿನ ಹನಿಗಳಿಂದ ಬ್ರಹ್ಮನ ಸೃಷ್ಟಿಯಾಗುವುದೆಂದು ಹೇಳಿದೆ. ಅದನ್ನು ಆಧಾರವಾಗಿಟ್ಟುಕೊಂಡು ಇಲ್ಲಿ ಹೊಸ ಬ್ರಹ್ಮನ ಸೃಷ್ಟಿಗಾಗಿ ಪರಮಾತ್ಮನ ಹಣೆಯಲ್ಲಿ ಹುಟ್ಟಿದ ಬೆವರಿನ ಸಾಲು ಕಿರೀಟದ ಕೆಳಗೆ ಪೋಣಿಸಿರುವ ಮುತ್ತಿನ ಸಾಲು ಎಂದು ವರ್ಣಿಸಲಾಗಿದೆ. ಪರಮಾತ್ಮನ ಸಾಕ್ಷಾದ್ದರ್ಶನದಿಂದ ಒಬ್ಬ ಬ್ರಹ್ಮನು ಮುಕ್ತನಾದರೆ ಸೃಷ್ಟಿಕಾರ್ಯಗಳನ್ನು ನಿರ್ವಹಿಸಲು ಇನ್ನೊಬ್ಬ ಬ್ರಹ್ಮನ ಸೃಷ್ಟಿಯ ಅಪೇಕ್ಷೆಯನ್ನುಂಟುಮಾಡಿತು ಎಂದು ಇದಕ್ಕೆ ಕಾರಣವನ್ನು ಕವಿ ಉತ್ಪ್ರೇಕ್ಷಿಸಿದ್ದಾನೆ. ಕೈತವಾಪಹ್ನುತಿ ಅಲಂಕಾರ.

ರಾಜಂತ್ಯನರ್ಘಮಣಿಸಂಘಮಯೇ ಕಿರೀಟೇ
ರಾಜೀವಲೋಚನ ನ ನೀಲಮಣಿಪ್ರವೇಕಾಃ ।
ಆಘ್ರಾಯ ಗಂಧಮಲಿನಸ್ತವ ಕುಂತಲಾನಾ-
ಮಂತಃ ಪ್ರವೇಷ್ಟುಮನಸಃ ಪರಿತೋ ನಿಲೀನಾಃ ॥ ೧೧೪ ॥

**ಅನುವಾದ :** ಅಮೂಲ್ಯವಾದ ರತ್ನಗಳ ಸಮೂಹದಿಂದ ತುಂಬಿರುವ ನಿನ್ನ ಕಿರೀಟದಲ್ಲಿ ಹೊಳೆಯುತ್ತಿರುವುವು ಶ್ರೇಷ್ಠ ಇಂದ್ರನೀಲಮಣಿಗಳಲ್ಲ. ನಿನ್ನ ಕೂದಲುಗಳ ಸೌರಭವನ್ನು ಆಘ್ರಾಣಿಸಿ ಕಿರೀಟದೊಳಗೆ ಪ್ರವೇಶಿಸಲು ಅಪೇಕ್ಷಿಸಿ ಸುತ್ತಲೂ ಕುಳಿತಿರುವ ದುಂಬಿಗಳೇ ಅವು.

**ವಿವರಣೆ :** ಪರಮಾತ್ಮನ ಕಿರೀಟದಲ್ಲಿ ನಾನಾರತ್ನಗಳು ಕಂಗೊಳಿಸುತ್ತವೆ. ಅವುಗಳಲ್ಲಿ ನೀಲಕಾಂತಿಯ ಇಂದ್ರನೀಲಮಣಿಗಳೂ ಇವೆ. ಕವಿಯು ಅವು ಇಂದ್ರನೀಲಮಣಿಗಳಲ್ಲ, ದುಂಬಿಗಳು ಎಂದು ವರ್ಣಿಸುತ್ತಾನೆ. ಅವು ಬರಲು ಕಾರಣವೇನು ? ಪರಮಾತ್ಮನ ಕೂದಲಿನ ಪರಿಮಳ ಅವನ್ನು ಆಕರ್ಷಿಸಿದೆ. ಕಿರೀಟದೊಳಗೆ ಹೋಗಲು ಅಪೇಕ್ಷಿಸಿ ಅವು ಕಿರೀಟದಲ್ಲಿ ಸುತ್ತಲೂ ಕುಳಿತಿವೆ ಎಂದು ಕವಿಯ ವರ್ಣನೆ. ಶುದ್ಧಾಪಹ್ನುತಿ ಎಂಬ ಅಲಂಕಾರ. ಏಕೆಂದರೆ ನೀಲಮಣಿಗಳಲ್ಲಿ ಭ್ರಮರತ್ವವನ್ನು ಆರೋಪಿಸುವುದಕ್ಕಾಗಿ ಅವುಗಳ ನೀಲ ಮಣಿತ್ವವನ್ನು ನಿಷೇಧಿಸಲಾಗಿದೆ. ಶುದ್ಧಾಪಹ್ನುತಿರನ್ಯಸ್ಯಾರೋಪಾರ್ಥೋ ಧರ್ಮನಿಹ್ನವಃ ಎಂದು ಆ ಅಲಂಕಾರದ ಲಕ್ಷಣ.

ಆ ಪಾದಮಾಚಿಕುರಭಾರಮಶೇಷಮಂಗ-
ಮಾನಂದವೃಂದಲಸಿತಂ ಸುದೃಶಾಮಸೀಮಮ್ ।
ಅಂತರ್ಮಮ ಸ್ಫುರತು ಸಂತತಮಂತರಾತ್ಮನ್
ಅಂಭೋಜಲೋಚನ ತವ ಶ್ರಿತಹಸ್ತಶೈಲಮ್ ॥ ೧೧೫ ॥

**ಅನುವಾದ :** ಅಂತರಾತ್ಮನಾದ ಹರಿಸ್ವರೂಪನಾದ ವರದರಾಜ, ಸಮ್ಯಗ್ ಜ್ಞಾನಿಗಳಿಗೂ ಸುಂದರಿಯರಿಗೂ ಆನಂದರಾಶಿಯನ್ನು ತುಂಬುವ,

ಹಸ್ತಿಗಿರಿಯನ್ನು ಆಶ್ರಯಿಸಿರುವ ಪಾದದಿಂದ ಕೇಶಪಾಶದವರೆಗೂ ಹೊಳೆಯುವ ನಿನ್ನ ಸಮಸ್ತ ದೇಹವು ನನ್ನ ಅಂತರಂಗದಲ್ಲಿ ಸದಾ ಸ್ಫುರಿಸಲಿ.

**ವಿವರಣೆ :** ಪಾದದಿಂದ ಆರಂಭಿಸಿ ಕೇಶಪಾಶದವರೆಗೆ ವರದರಾಜನನ್ನು ವರ್ಣಿಸಿದ ಕವಿ ಈ ಪದ್ಯದಲ್ಲಿ ತನಗೆ ಪರಮಾತ್ಮನ ದಿವ್ಯಮಂಗಳವಿಗ್ರಹದ ಪೂರ್ಣದರ್ಶನವಾಗಲಿ, ಜ್ಞಾನಿಗಳಿಗೆ ಆನಂದಮಯವಾದ ಆ ಭಗವದ್ದರ್ಶನವು ಸತತವಾಗಿ ತನಗೆ ಅಂತರಂಗದಲ್ಲಿ ದೊರೆಯುತ್ತಿರಲಿ ಎಂದು ಹಾರೈಸಿ ವರದರಾಜ ಸ್ತೋತ್ರಕ್ಕೆ ಮಂಗಳವನ್ನು ಹಾಡಿದ್ದಾನೆ.

***ಇತಿ ಶ್ರೀಮದ್ ಭಾರದ್ವಾಜಕುಲಜಲಧಿಕೌಸ್ತುಭ***

***ಶ್ರೀಮದದ್ವೈತವಿದ್ಯಾಚಾರ್ಯ ಶ್ರೀವಿಶ್ವಜಿದ್ಯಾಜಿ***

***ಶ್ರೀರಂಗರಾಜಾಧ್ವರಿವರಸೂನುನಾ ಶ್ರೀಮದಪ್ಪಯ್ಯದೀಕ್ಷಿತೇನ ಕೃತಃ***

***ಶ್ರೀ ವರದರಾಜಸ್ತವಃ ಸಂಪೂರ್ಣಃ***